WPP-47

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಜುಲೈ ೨೬, ೨೦೧೨ (ಶ್ರಾವಣ ೪, ಶಕ ವರ್ಷ ೧೯೩೪) | ಸಂಚಿಕೆ ೩೦ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಸರ್ಕಾರಿ ಸೀಟುಗಳಲ್ಲಿ ವೈದ್ಯಕೀಯ ಪದವಿ, ಸ್ನಾತಕೋತ್ತರ ಪದವಿ/ಡಿಪ್ಲೊಮ ವ್ಯಾಸಂಗವನ್ನು ಪೂರೈಸುವ ಅಭ್ಯರ್ಥಿಗಳ ಸೇವೆಯನ್ನು ಸರ್ಕಾರಿ ಆಸ್ಪತ್ರೆಗಳಲ್ಲಿ ಉಪಯೋಗಿಸಿಕೊಳ್ಳುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ: ಆಕುಕ 314 ಹೆಚ್‌ಎಸ್‌ಹೆಚ್ 2010 ದಿನಾಂಕ: 05/10/2010

2) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರ ಪತ್ರ ಸಂಖ್ಯೆ: ಡಿಹೆಚ್‌ಎಸ್/ಬಿಇಸಿ/11/2011–12 ದಿನಾಂಕ: 26/12/2011

**ಪ್ರಸ್ತಾವನೆ:**

ರಾಜ್ಯದ ಜನತೆಗೆ ಅದರಲ್ಲೂ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ವರ್ಗದ ಬಡಜನತೆಗೆ ಉತ್ತಮ ಆರೋಗ್ಯ ಸೇವೆ ಹಾಗೂ ಆರೋಗ್ಯಕರ ಪರಿಸರವನ್ನುಂಟು ಮಾಡುವ ಒಂದು ಮಹಾನ್ ಧ್ಯೇಯವನ್ನು ಸರ್ಕಾರವು ಹೊಂದಿದ್ದು, ಅದನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರಲು ಹಲವಾರು ಕಾರ್ಯಕ್ರಮಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಹಮ್ಮಿಕೊಂಡಿದೆ. ಇದಕ್ಕಾಗಿ ರಾಜ್ಯದಲ್ಲಿನ ಅನೇಕ ಆಸ್ಪತ್ರೆಗಳನ್ನು ಮೇಲ್ದರ್ಜೆಗೇರಿಸುವ ಕ್ರಮಗಳನ್ನು ಕೈಗೊಂಡು ಸದರಿ ಆಸ್ಪತ್ರೆಗಳಲ್ಲಿ ಮೂಲಭೂತ ಸೌಕರ್ಯ ಹಾಗೂ ನೂತನ ಉಪಕರಣಗಳನ್ನು ಅಳವಡಿಸಲಾಗಿದೆ. ಆದರೆ, ಆಸ್ಪತ್ರೆಗಳಲ್ಲಿ ಸಾಕಷ್ಟು ತಜ್ಞ ವೈದ್ಯರ ಕೊರತೆಯಿಂದಾಗಿ ಅವುಗಳ ಸೌಲಭ್ಯವನ್ನು ನಿರೀಕ್ಷಿತ ಮಟ್ಟದಲ್ಲಿ ಉಪಯೋಗಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಇದಕ್ಕಾಗಿ ಜನತೆಗೆ ಉತ್ತಮ ರೀತಿಯಲ್ಲಿ ಆರೋಗ್ಯ ಸೇವೆಯನ್ನು ಒದಗಿಸಲು ಸರ್ಕಾರಿ ಆಸ್ಪತ್ರೆಗಳಲ್ಲಿ ತಜ್ಞ ವೈದ್ಯರ ಕೊರತೆಯಿದ್ದು, ಈ ಸಮಸ್ಯೆಯನ್ನು ನಿವಾರಿಸಲು ಸರ್ಕಾರವು ಹಲವು ಮಾರ್ಗೋಪಾಯಗಳ ಬಗ್ಗೆ ಗಂಭೀರವಾಗಿ ಚಿಂತನೆ ಮಾಡುತ್ತಿದೆ.

Karnataka Conduct of Entrance Test for selection and admission to Post Graduate and Dental degree and Diploma course Rules, 2006 (ಪಿಜಿಇಟಿ ನಿಯಮಗಳು) ರಲ್ಲಿ ಸ್ನಾತಕೋತ್ತರ ಪದವಿ ಅಥವಾ ಡಿಪ್ಲೋಮ ವ್ಯಾಸಂಗವನ್ನು ಮಾಡುವ ಅಭ್ಯರ್ಥಿಗಳಿಗೆ ನಿಯಮ 15 ರ ಉಪನಿಯಮ (5), (6) ಮತ್ತು (7) ರಲ್ಲಿ ಕೆಳಗಿನಂತೆ ಷರತ್ತುಗಳು ಇರುತ್ತವೆ:

ಉಪನಿಯಮ (5): Candidates selecting Government Colleges and Government seats in Private colleges (under concession fee) for ***Post Graduate*** courses shall furnish an understanding that he will ***serve the Government for a minimum period of three years*** after completion of the course if Government desires.

ಉಪನಿಯಮ (6): Candidates who avail ***100% tuition fee reimbursement*** from the Government shall furnish an undertaking that he will ***serve the Government for a minimum period of five years***, if Government desires.

ಉಪನಿಯಮ (7): A penalty of ***Rs. 5,00,000/- for degree*** and ***Rs. 3,00,000/- for Diploma*** shall be levied in case the candidates fail to serve the Government after completion of the course as per the undertaking.

ಹಾಗೆಯೇ, ಎಂಬಿಬಿಎಸ್ ವ್ಯಾಸಂಗ ಮಾಡುವ ಅಭ್ಯರ್ಥಿಗಳು ಸಹ ಕೋರ್ಸ್‌ನ್ನು ಯಶಸ್ವಿಯಾಗಿ ಪೂರೈಸಿದ ನಂತರ ಒಂದು ವರ್ಷ ಸರ್ಕಾರಿ ಸೇವೆಯನ್ನು ಮಾಡಬೇಕೆಂದು ನಿಯಮಗಳಲ್ಲಿ ಅವಕಾಶ ಕಲ್ಪಿಸಲಾಗಿದೆ. ಈ ಬಗ್ಗೆ The Karnataka Professional Education Institutions (Regulation of Admission & Fixation of Fee) (Special Provisions) Act, 2006 ರಡಿ ರೂಪಿಸಿರುವ Karnataka Selection of Candidates for admission to Government seats in professional educational Institutions Rules 2006 ರ ನಿಯಮ 11 ರಲ್ಲಿ ಕೆಳಕಂಡಂತೆ ನಿಗದಿಪಡಿಸಲಾಗಿದೆ:

11. Execution of Bond by candidates selecting Medical Seats (MBBS in Government Colleges:- A Candidate ***who selects MBBS seat in any of the Government College*** in Karnataka is required to execute a Bond(signed by the candidate and parent) giving an undertaking that he is ***prepared to serve in any Primary Health Centre or Primary Health Unit in Rural Areas of Karnataka on completion of the course for a minimum period of one year*** and that in default thereof, the candidate will be liable to pay a penalty of Rupees one lakh to Government.

ಈ ನಿಯಮಗಳ ಪ್ರಕಾರ, ಎಂಬಿಬಿಎಸ್ ಪದವಿಯನ್ನು ಪೂರೈಸುವ ಅಭ್ಯರ್ಥಿಯು ಗ್ರಾಮೀಣ ಪ್ರದೇಶದ ಸರ್ಕಾರಿ ಆಸ್ಪತ್ರೆಯಲ್ಲಿ ಕನಿಷ್ಠ ಒಂದು ವರ್ಷ ಸೇವೆಯನ್ನು ಸಲ್ಲಿಸಬೇಕಾಗುತ್ತದೆ ಹಾಗೂ, ಸ್ನಾತಕೋತ್ತರ ಪದವಿ/ಡಿಪ್ಲೊಮವನ್ನು ಪೂರೈಸುವ ಅಭ್ಯರ್ಥಿಯು ಕನಿಷ್ಠ ಮೂರು ವರ್ಷಗಳು ಸರ್ಕಾರಿ ಆಸ್ಪತ್ರೆಗಳಲ್ಲಿ ಸೇವೆಯನ್ನು ಸಲ್ಲಿಸಬೇಕೆಂದಿರುತ್ತದೆ. ಅದರಂತೆ, 2007-08 ನೇ ಸಾಲಿನ ಮತ್ತು ನಂತರದ ಶೈಕ್ಷಣಿಕ ವರ್ಷಗಳಲ್ಲಿ ಸರ್ಕಾರಿ ಕಾಲೇಜುಗಳಲ್ಲಿ ರಿಯಾಯಿತಿ ಅಥವಾ ಪೂರ್ಣ ಶುಲ್ಕ ರಿಯಾಯಿತಿ ಪಡೆಯುವ ಮೂಲಕ ಮತ್ತು ಖಾಸಗಿ ಕಾಲೇಜುಗಳಲ್ಲಿ ಸರ್ಕಾರದ ಪಾಲಿನ ಸೀಟುಗಳಲ್ಲಿ ರಿಯಾಯಿತಿ ಶುಲ್ಕ ದರದಲ್ಲಿ ವೈದ್ಯಕೀಯ ಪದವಿ, ಸ್ನಾತಕೋತ್ತರ ಪದವಿ/ಡಿಪ್ಲೊಮ ಕೋರ್ಸ್‌ಗಳಿಗೆ ದಾಖಲಾತಿ ಪಡೆದ ಅಭ್ಯರ್ಥಿಗಳು ಸರ್ಕಾರದಲ್ಲಿ ಸೇವೆ ಸಲ್ಲಿಸುವುದಾಗಿ ಮುಚ್ಚಳಿಕೆ ಪತ್ರವನ್ನು ಬರೆದು ಕೊಟ್ಟಿರುತ್ತಾರೆ.

ವ್ಯಾಸಂಗವನ್ನು ಪೂರೈಸಿದ ನಂತರ ಸರ್ಕಾರಿ ಆಸ್ಪತ್ರೆಗಳಲ್ಲಿ ಸೇವೆ ಸಲ್ಲಿಸುವುದಾಗಿ ಬಂಧಪತ್ರಗಳನ್ನು ಬರೆದುಕೊಟ್ಟಿರುವಂತಹ ಸುಮಾರು 1250 ಎಂಬಿಬಿಎಸ್ ಪದವಿ ಪಡೆದ ಅಭ್ಯರ್ಥಿಗಳು ಹಾಗೂ 400 ತಜ್ಞ ವೈದ್ಯ ಅಭ್ಯರ್ಥಿಗಳ ಸೇವೆಯು ಸರ್ಕಾರಕ್ಕೆ ಪ್ರತಿ ವರ್ಷವೂ ಲಭ್ಯವಾಗಲಿದೆ. ಮುಚ್ಚಳಿಕೆಯ ಪ್ರಕಾರ ಅವರುಗಳ ಸೇವೆಯನ್ನು ಸರ್ಕಾರಿ ಆಸ್ಪತ್ರೆಗಳಲ್ಲಿ ಉಪಯೋಗಿಸಿಕೊಳ್ಳುವ ದೃಷ್ಟಿಯಿಂದ ಎಂಬಿಬಿಎಸ್ ವೈದ್ಯ ಅಭ್ಯರ್ಥಿಗಳಿಗೆ ರೂ.25,000 ಹಾಗೂ ಸ್ನಾತಕೋತ್ತರ ಪದವಿ/ಡಿಪ್ಲೊಮ ಪಡೆದ ಅಭ್ಯರ್ಥಿಗಳಿಗೆ ಕ್ರಮವಾಗಿ ರೂ.35,000/ರೂ.32,500 ಗಳ ಸಂಚಿತ ಸಂಭಾವನೆ ಆಧಾರದ ಮೇಲೆ ನೇಮಿಸಿಕೊಳ್ಳಬಹುದೆಂದು ಪ್ರಸ್ತಾಪಿಸಿ ಈ ಕುರಿತು ಸರ್ಕಾರದ ಆದೇಶ ಹೊರಡಿಸುವಂತೆ ಕೋರಿ ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಪ್ರಸ್ತಾವನೆ ಸಲ್ಲಿಸಿದ್ದಾರೆ.

ಸರ್ಕಾರಿ/ಖಾಸಗಿ ವೈದ್ಯಕೀಯ ವಿಜ್ಞಾನ ಸಂಸ್ಥೆಗಳಲ್ಲಿ ಸರ್ಕಾರದ ರಿಯಾಯಿತಿ ಶುಲ್ಕದಲ್ಲಿ ವಿವಿಧ ವಿಷಯಗಳಲ್ಲಿ ಡಿಪ್ಲೊಮ ವ್ಯಾಸಂಗಕ್ಕಾಗಿ ಸರ್ಕಾರಿ ಸೀಟುಗಳನ್ನು ಆಯ್ಕೆಮಾಡಿಕೊಂಡ ಸಮಯದಲ್ಲಿ ಬರೆದುಕೊಟ್ಟ ಕರಾರು ಪತ್ರಗಳನ್ನು ಅನುಷ್ಠಾನಗೊಳಿಸುವುದಕ್ಕಾಗಿ, ವ್ಯಾಸಂಗವನ್ನು ಪೂರ್ಣಗೊಳಿಸಿದ ಡಿಪ್ಲೊಮ ಪದವಿ ಹೊಂದಿದ ತಜ್ಞ ವೈದ್ಯ ಅಭ್ಯರ್ಥಿಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆಸ್ಪತ್ರೆಗಳಲ್ಲಿ ಅವರ ತಜ್ಞತೆಗೆ ಅನುಗುಣವಾಗಿ ವರ್ಷಕ್ಕೆ ಒಂದು ಸಾರಿ ನವೀಕರಿಸುವ ಷರತ್ತಿಗೆ ಒಳಪಟ್ಟು ಮೂರು ವರ್ಷದವರೆಗೆ ಅಥವಾ ತಜ್ಞ ಅಭ್ಯರ್ಥಿಗಳು ಲಭ್ಯವಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾಸಿಕ ರೂ.32,500/- ಸಂಚಿತ ಸಂಭಾವನೆಯ ಮೇಲೆ ತಾತ್ಕಾಲಿಕವಾಗಿ ನೇಮಕಾತಿ ಮಾಡಿಕೊಳ್ಳಲು ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈಗಾಗಲೇ ಮಂಜೂರಾತಿ ನೀಡಿದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿನ ಆಸ್ಪತ್ರೆ/ಕೇಂದ್ರಗಳಲ್ಲಿ ವೈದ್ಯಾಧಿಕಾರಿಗಳು ಮತ್ತು ತಜ್ಞ ವೈದ್ಯರ ಕೊರತೆ ಇದ್ದು, ಸದರಿ ಆಸ್ಪತ್ರೆಗಳಲ್ಲಿನ ಮೂಲಭೂತ ಸೌಲಭ್ಯಗಳನ್ನು ಸೂಕ್ತ ರೀತಿಯಲ್ಲಿ ಉಪಯೋಗಿಸಿ ಸಾರ್ವಜನಿಕರಿಗೆ ಸೂಕ್ತ ಆರೋಗ್ಯ ಸೇವೆಯನ್ನು ಒದಗಿಸುವುದು ಅವಶ್ಯಕವಾಗಿರುವುದರಿಂದ ಮೇಲೆ ತಿಳಿಸಿದ 2006 ರ ನಿಯಮಗಳ ಪ್ರಕಾರ, ಸರ್ಕಾರಿ ಸೀಟುಗಳನ್ನು ರಿಯಾಯಿತಿ ಶುಲ್ಕದಲ್ಲಿ ಪಡೆದು ಎಂಬಿಬಿಎಸ್ ಪದವಿ ಅಥವಾ ವಿವಿಧ ತಜ್ಞತೆಯಲ್ಲಿ ಸ್ನಾತಕೋತ್ತರ ಪದವಿಯ ವ್ಯಾಸಂಗವನ್ನು ಪೂರ್ಣಗೊಳಿಸಿದ ವೈದ್ಯ ಅಭ್ಯರ್ಥಿಗಳ ಸೇವೆಯನ್ನು ಸರ್ಕಾರಿ ಆಸ್ಪತ್ರೆಗಳಲ್ಲಿ ಉಪಯೋಗಿಸಿಕೊಳ್ಳಲು ಸರ್ಕಾರವು ಉದ್ದೇಶಿಸಿ, ಇವರುಗಳನ್ನು ನೇಮಕಾತಿ ಮಾಡಿಕೊಳ್ಳುವ ಕುರಿತು ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಲಾಗಿದೆ. ಸದರಿ ಇಲಾಖೆಯು ಆಡಳಿತ ಇಲಾಖೆಯು ಉದ್ದೇಶಿಸಿರುವಂತೆ 2012-13 ನೇ ಸಾಲಿಗೆ ಎಂಬಿಬಿಎಸ್ ಪದವಿ ಪಡೆದ ಅಭ್ಯರ್ಥಿಗಳನ್ನು ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳಿಗೆ ಮತ್ತು ತದನಂತರ ಅವಶ್ಯವಿದ್ದಲ್ಲಿ ಗರಿಷ್ಠ 400 ರವರೆಗೆ ಸೂಪರ್ ನ್ಯೂಮರರಿ

ಹುದ್ದೆಗಳನ್ನು ಸೃಜಿಸಿ 24X7 ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಹೆಚ್ಚುವರಿಯಾಗಿ ಒಬ್ಬರು ವೈದ್ಯರನ್ನು ರೂ.25,000 ಸಂಚಿತ ಸಂಭಾವನೆಯ ಮೇಲೆ ನೇಮಿಸಿಕೊಳ್ಳುವಂತೆ ಹಾಗೂ ಸ್ನಾತಕೋತ್ತರ ಪದವಿ ಪಡೆದ ಅಭ್ಯರ್ಥಿಗಳನ್ನು ಖಾಲಿ ಇರುವ ತಜ್ಞ ಹುದ್ದೆಗಳಿಗೆ ರೂ.35,000/- ಸಂಚಿತ ಸಂಭಾವನೆಯ ಮೇಲೆ ನೇಮಕ ಮಾಡಿಕೊಳ್ಳಲು ತಿಳಿಸಿ, ಈ ಅಭ್ಯರ್ಥಿಗಳ ಹಾಜರಾತಿ ಮತ್ತು ಕಾರ್ಯನಿರ್ವಹಣೆಯ ಮೇಲ್ವಿಚಾರಣೆ ಮಾಡಲು ಒಂದು ವ್ಯವಸ್ಥೆಯನ್ನು ರೂಪಿಸುವಂತೆ ತಿಳಿಸಿ, ಹೆಚ್ಚಿನ ಹುದ್ದೆಗಳ ಅವಶ್ಯಕತೆ ಇದ್ದಲ್ಲಿ ಸಂಖ್ಯಾಧಿರಿಕ್ತ ಹುದ್ದೆಗಳನ್ನು ಸೃಜಿಸಲು ಪ್ರಸ್ತಾವನೆ ಸಲ್ಲಿಸಲು ತಿಳಿಸಿದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ವೈದ್ಯಾಧಿಕಾರಿ/ತಜ್ಞ ವೈದ್ಯರ ಕೊರತೆಯಿರುವುದರಿಂದ ರಿಯಾಯಿತಿ ಶುಲ್ಕದಲ್ಲಿ ಸರ್ಕಾರಿ ಸೀಟುಗಳನ್ನು ಪಡೆದು ಎಂ.ಬಿ.ಬಿ.ಎಸ್/ಸ್ನಾತಕೋತ್ತರ ಪದವಿ ವ್ಯಾಸಂಗವನ್ನು ಪೂರ್ಣಗೊಳಿಸಿದ ವೈದ್ಯ ಅಭ್ಯರ್ಥಿಗಳು ಬರೆದುಕೊಟ್ಟ ಕರಾರು ಪತ್ರದನ್ವಯ ಅವರುಗಳ ಸೇವೆಯನ್ನು ಸರ್ಕಾರಿ ಸೇವೆಯಲ್ಲಿ ಉಪಯೋಗಿಸಿಕೊಳ್ಳಲು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 143 ಹೆಚ್‌ಎಸ್‌ಹೆಚ್ 2012 ಬೆಂಗಳೂರು, ದಿನಾಂಕ: 20/04/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರಿ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ರಿಯಾಯಿತಿ ಶುಲ್ಕದೊಂದಿಗೆ ಎಂಬಿಬಿಎಸ್ ವ್ಯಾಸಂಗಕ್ಕಾಗಿ ಹಾಗೂ ಸರ್ಕಾರಿ/ಖಾಸಗಿ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಸರ್ಕಾರಿ ಕೋಟಾದ ಸೀಟುಗಳನ್ನು ರಿಯಾಯಿತಿ ಶುಲ್ಕದಲ್ಲಿ ಸ್ನಾತಕೋತ್ತರ ಪದವಿ/ಡಿಪ್ಲೊಮ ವ್ಯಾಸಂಗಕ್ಕಾಗಿ ಆಯ್ಕೆಯ ಸಮಯದಲ್ಲಿ ಬರೆದುಕೊಟ್ಟ ಕರಾರು ಪತ್ರಗಳಲ್ಲಿನ ಷರತ್ತುಗಳನ್ನು ಅನುಷ್ಠಾನಗೊಳಿಸುವುದಕ್ಕಾಗಿ, ವ್ಯಾಸಂಗವನ್ನು ಪೂರ್ಣಗೊಳಿಸಿದ ಈ ಅಭ್ಯರ್ಥಿಗಳ ಸೇವೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆಸ್ಪತ್ರೆ/ಕೇಂದ್ರಗಳಲ್ಲಿ ಕೆಳಕಂಡ ಮಾರ್ಗಸೂಚಿಗಳಿಗೆ ಅನುಗುಣವಾಗಿ ಬಳಸಿಕೊಳ್ಳಲು ಸರ್ಕಾರವು ಮಂಜೂರಾತಿ ನೀಡಿದೆ.

(1) ಪ್ರಥಮತ: ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಖಾಲಿ ಇರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಹುದ್ದೆಗಳಲ್ಲಿ ಎಂಬಿಬಿಎಸ್ ಪದವಿಯನ್ನು ಪಡೆದ ಅಭ್ಯರ್ಥಿಗಳನ್ನು ನೇಮಿಸಿಕೊಳ್ಳುವುದು. ನಂತರ ಅವಶ್ಯವಿದ್ದಲ್ಲಿ ಗರಿಷ್ಠ 400 ಹೆಚ್ಚುವರಿ ವೈದ್ಯ ಅಭ್ಯರ್ಥಿಗಳನ್ನು 24X7 ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಅಗತ್ಯವಿರುವ ಕಡೆ ಒಬ್ಬ ಹೆಚ್ಚುವರಿ ವೈದ್ಯರನ್ನು ಒದಗಿಸುವ ಉದ್ದೇಶಕ್ಕಾಗಿ ಸಂಖ್ಯಾಧಿರಿಕ್ತ ಹುದ್ದೆಗಳನ್ನು ಸೃಜಿಸಲು ಪ್ರಸ್ತಾವನೆ ಸಲ್ಲಿಸುವುದು. ನಂತರವೂ ಸಹ ಇನ್ನೂ ಹೆಚ್ಚಿನ ಸಂಖ್ಯೆಯ ಸಂಖ್ಯಾಧಿರಿಕ್ತ ಹುದ್ದೆಗಳು ಅಗತ್ಯವಿದ್ದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು.

(2) ಸ್ನಾತಕೋತ್ತರ ಪದವಿ ಪಡೆದ ಅಭ್ಯರ್ಥಿಗಳನ್ನು ಅವರ ತಜ್ಞತೆಗೆ ಅನುಗುಣವಾಗಿ ಖಾಲಿ ಇರುವ ತಜ್ಞ ವೈದ್ಯರ ಹುದ್ದೆಗಳಿಗೆ ಮಾತ್ರ ನೇಮಕ ಮಾಡಿಕೊಳ್ಳುವುದು.

(3) ಡಿಪ್ಲೊಮ ಪದವಿ ಪಡೆದ ಅಭ್ಯರ್ಥಿಗಳನ್ನು ಅವರ ತಜ್ಞತೆಗೆ ಅನುಗುಣವಾಗಿ ಖಾಲಿ ಇರುವ ಹುದ್ದೆಗಳಿಗೆ ಮಾತ್ರ ಸರ್ಕಾರಿ ಆದೇಶ ಸಂಖ್ಯೆ: ಆಕುಕ 314 ಹೆಚ್‌ಎಸ್‌ಹೆಚ್ 2010 ದಿನಾಂಕ: 05/10/2010 ರನ್ವಯ ನೇಮಕ ಮಾಡಿಕೊಳ್ಳುವುದು.

(4) ಈ ಎಲ್ಲಾ ವೈದ್ಯರ ಹಾಜರಾತಿ ಮತ್ತು ಕಾರ್ಯನಿರ್ವಹಣೆಯ ಮೇಲ್ವಿಚಾರಣೆ ಮಾಡಲು ಒಂದು ವ್ಯವಸ್ಥೆಯನ್ನು ರೂಪಿಸಲು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರು ಕ್ರಮ ಕೈಗೊಳ್ಳುವುದು.

(5) ಸದರಿ ವ್ಯವಸ್ಥೆಯಡಿ ನೇಮಿಸುವ ಎಂಬಿಬಿಎಸ್ ವೈದ್ಯರಿಗೆ ರೂ.25,000 ಹಾಗೂ ಸ್ನಾತಕೋತ್ತರ ಪದವಿ ಪಡೆದ ಅಭ್ಯರ್ಥಿಗಳಿಗೆ ರೂ.35,000/- ಮತ್ತು ಸ್ನಾತಕೋತ್ತರ ಡಿಪ್ಲೊಮ ಪಡೆದ ಅಭ್ಯರ್ಥಿಗಳಿಗೆ ರೂ.32,500/- ಗಳ ಸಂಚಿತ ಸಂಭಾವನೆ ನೀಡುವುದು.

(6) ಈ ವೈದ್ಯ ಅಭ್ಯರ್ಥಿಗಳಿಗೆ ಸಂದಾಯ ಮಾಡುವ ಸಂಭಾವನೆಯನ್ನು ಇಲಾಖೆಯ ಲೆಕ್ಕ ಶೀರ್ಷಿಕೆಗಳಡಿ ಲಭ್ಯವಿರುವ ಅನುದಾನದಿಂದ ಭರಿಸತಕ್ಕದ್ದು. ಹೆಚ್ಚುವರಿ ಅನುದಾನ ಅಗತ್ಯವಿದ್ದಲ್ಲಿ ಸೆಪ್ಟೆಂಬರ್ 2012 ರೊಳಗೆ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸತಕ್ಕದ್ದು.

(7) ಸರ್ಕಾರದ ಈ ಮಂಜೂರಾತಿಯು 2012-13 ನೇ ಆರ್ಥಿಕ ವರ್ಷಕ್ಕೆ ಮಾತ್ರ ಸೀಮಿತವಾಗಿದೆ. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರು ಈ ವ್ಯವಸ್ಥೆ ಹಾಗೂ ಅದರ ಕಾರ್ಯಕ್ಷಮತೆಯನ್ನು ಜನವರಿ 2013 ರಲ್ಲಿ ಪರಿಶೀಲಿಸಿ, ಇದನ್ನು 2013-14 ನೇ ಸಾಲಿನಲ್ಲಿ ಮುಂದುವರಿಸುವುದಾದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವುದು.

(8) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ವೈದ್ಯಕೀಯ ಪದವಿ ಅಥವಾ ಸ್ನಾತಕೋತ್ತರ ಪದವಿ/ಡಿಪ್ಲೊಮ ವ್ಯಾಸಂಗ ಪೂರ್ಣಗೊಳಿಸಿದ ವೈದ್ಯ ಅಭ್ಯರ್ಥಿಗಳ ಪಟ್ಟಿಯನ್ನು ನಿರ್ದೇಶಕರು, ವೈದ್ಯಕೀಯ ಶಿಕ್ಷಣ, ಬೆಂಗಳೂರು/ರಿಜಿಸ್ಟ್ರಾರ್, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಇವರಿಂದ ಪಡೆದು ನೇಮಕಾತಿ ಮಾಡಿಕೊಳ್ಳಲು ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 469 ವೆಚ್ಚ-5/2012 ದಿನಾಂಕ: 10/04/2012 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಿಕ್ಕೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ಸೇವೆಗಳು)

**ಪಿ.ಆರ್. 1307**

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಜಿ.ಆರ್.ತಿಪ್ಪೇಸ್ವಾಮಿ, ನಿವೃತ್ತ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ, ಇವರ ಮೇಲಿನ ಆರೋಪಗಳ ವಿಚಾರಣೆಗೆ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳ ನೇಮಕಾತಿ ಬಗ್ಗೆ.

**ಓದಲಾಗಿದೆ:**

1) ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ, ಇವರ ಪ್ರಸ್ತಾವನೆ ಸಂಖ್ಯೆ : ಕಂ:ಪ್ರಾಆಗು:ಇಎಸ್‌ಸಿ:355/ 2007-08/1096, ದಿನಾಂಕ :02/06/2010.
2) ಸರ್ಕಾರದ ಆದೇಶ ಸಂಖ್ಯೆ : ಇಡಿ 58 ಡಿಜಿಪಿ 2010, ದಿನಾಂಕ:29/04/2011.
3) ಕಾರಣ ಕೇಳುವ ನೋಟೀಸು ದಿನಾಂಕ :03/05/2011.
4) ಶ್ರೀ ಜಿ.ಆರ್.ತಿಪ್ಪೇಸ್ವಾಮಿ, ನಿವೃತ್ತ ಉಪ ನಿರ್ದೇಶಕರು, ಇವರು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆ ದಿನಾಂಕ : 6/06/2011.

**ಪ್ರಸ್ತಾವನೆ:-**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಶ್ರೀ ಜಿ.ಆರ್.ತಿಪ್ಪೇಸ್ವಾಮಿ, ನಿವೃತ್ತ ಉಪ ನಿರ್ದೇಶಕರು(ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ಇವರು ಈ ಹಿಂದೆ ಉಪ ನಿರ್ದೇಶಕರು(ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಶ್ರೀಮತಿ ಕೆ.ಗಾಯತ್ರಿ, (ಗಂಡ ದಿವಂಗತ ಶ್ರೀ ಆರ್.ದೊಡ್ಡಬಸವರಾಜು) ಇವರಿಗೆ ಅನುಕಂಪದ ಆಧಾರದ ಮೇಲೆ ನೇಮಕಾತಿಗಾಗಿ ಮೊದಲನೆ ಪತ್ನಿ ಜೀವಂತವಾಗಿರುವಾಗಲೇ ಎರಡನೇ ಪತ್ನಿಯಾದ ಶ್ರೀಮತಿ ಕೆ.ಗಾಯತ್ರಿರವರ ನೇಮಕಾತಿ ಪ್ರಸ್ತಾವನೆಯನ್ನು ನಿಯಮಬಾಹಿರವಾಗಿ ಮೇಲಾಧಿಕಾರಿಗಳಿಗೆ ಸಲ್ಲಿಸಿರುತ್ತಾರೆ. ಆದರೆ, ಮೊದಲನೆ ಪತ್ನಿ ಜೀವಂತವಿರುವಾಗಲೇ ಎರಡನೇ ಪತ್ನಿಗೆ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವುದು ಹಿಂದೂ ವಿವಾಹ ಕಾಯ್ದೆ 1955 ರ ಕಲಂ (5) ಮತ್ತು (10) ರನ್ವಯ ಮೊದಲನೇ ಪತ್ನಿ ಜೀವಿತ ಕಾಲದಲ್ಲಿ ವಿವಾಹ ವಿಚ್ಛೇದನ ಆಗದೆ ಎರಡನೇ ಮದುವೆ ಕಾನೂನಿನ ಪ್ರಕಾರ ಸಿಂಧುವಲ್ಲ. ಆದಾಗ್ಯೂ ಪ್ರಕರಣವನ್ನು ನೇಮಕಾತಿಗಾಗಿ ಸಲ್ಲಿಸಿದ್ದು, ಸದರಿ ಅಧಿಕಾರಿಯು ನಿಯಮಗಳಡಿಯಲ್ಲಿ ಪ್ರಕರಣವನ್ನು ಪರಿಶೀಲಿಸದೆ ಇರುವುದರಿಂದ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ದೋಷಾರೋಪಣಾ ಪಟ್ಟಿ ಅನುಬಂಧ-1 ರಿಂದ 4 ನ್ನು ಸಲ್ಲಿಸಿ ಶಿಸ್ತುಕ್ರಮ ಜರುಗಿಸಲು ಕೋರಲಾಗಿತ್ತು.

ಅದರನ್ವಯ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಶ್ರೀ ಜಿ.ಆರ್.ತಿಪ್ಪೇಸ್ವಾಮಿ, ಇವರ ಆರೋಪಗಳಿಗೆ ಹಿನ್ನೆಲೆಯಲ್ಲಿ ಇವರ ಮೇಲೆ ಸರ್ಕಾರಿ ಕೆಲಸದ ಸೂಚನೆ ನಿಯಮಗಳ ಉಲ್ಲಂಘನೆ ಅಧಿಕಾರ ದುರುಪಯೋಗದಂತಹ ದುರ್ನಡತೆಗಳಾಗಿದ್ದು ಸರ್ಕಾರಿ ನೌಕರರ ನಡವಳಿಕೆಗಳಿಗೆ ತರವಲ್ಲದ ವರ್ತಿಸಿದ್ದರಿಂದ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು 1966 ರ ನಿಯಮ-3 ಕ್ಕೆ ರ ಉಲ್ಲಂಘನೆಯ ಆರೋಪಗಳಿಗೆ ಗುರಿಯಾಗಿದ್ದು, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ-11 ರಡಿ ಶಿಸ್ತು ಕ್ರಮ ಜರುಗಿಸಲು ಉದ್ದೇಶಿಸಿದ್ದು, ಸದರಿಯವರು ದಿನಾಂಕ:31/03/2008 ರಂದು ವಯೋನಿವೃತ್ತಿ ಹೊಂದಿದ್ದರಿಂದ ಇವರ ವಿರುದ್ಧ ಅವರ ಮೇಲಿನ ಆರೋಪಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958 ರ ನಿಯಮ-214 ರಡಿ ಶಿಸ್ತು ಕ್ರಮ ಜರುಗಿಸಲು ಮಂಜೂರಾತಿ ನೀಡಿ, ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆಯ (3) ರಲ್ಲಿ ಸದರಿ ಅಧಿಕಾರಿಗೆ ಕಾರಣ ಕೇಳುವ ನೋಟೀಸು ಜಾರಿಗೊಳಿಸಿ, ನೋಟೀಸು ತಲುಪಿತ 15 ದಿನಗಳೊಳಗಾಗಿ ಆರೋಪಿತ ಅಧಿಕಾರಿಗಳ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಅದರಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಆರೋಪಿತ ಅಧಿಕಾರಿ / ಲಿಖಿತ ಹೇಳಿಕೆಗಳನ್ನು ಸಲ್ಲಿಸಿ, ತಾವು ನಿವೃತ್ತರಾಗಿರುವುದರಿಂದ ಅವರ ಮೇಲಿನ ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ. ಪರಿಶೀಲಿಸಲಾಗಿ, ಅವರ ಹೇಳಿಕೆಯನ್ನು ಒಪ್ಪಿಕೊಳ್ಳಲು ಸಮರ್ಥನೀಯವಾದ ಕಾರಣ ಇರುವುದಿಲ್ಲವೆಂದು ಮನಗಂಡು ಈ ಪ್ರಕರಣದ ಸತ್ಯಾಸತ್ಯೆಯನ್ನು ತಿಳಿದುಕೊಳ್ಳಲು ಕೂಲಂಕಷವಾಗಿ ವಿಚಾರಣೆ ನಡೆಸುವುದು ಸೂಕ್ತವೆಂದು ನಿರ್ಣಯಿಸಿ, ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳು 1957 ರ ನಿಯಮ-11 ರಡಿ

ಇಲಾಖಾ ವಿಚಾರಣೆ ನಡೆಸಲು ನಿರ್ಧರಿಸಿ, ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಕ ಮಾಡಲು ನಿರ್ಧರಿಸಿದೆ. ಅದರಂತೆ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ :ಇಡಿ 58 ಡಿಜಿಪಿ 2010, ಬೆಂಗಳೂರು, ದಿನಾಂಕ:17/04/2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ, ಶ್ರೀ ಜಿ.ಆರ್.ತಿಪ್ಪೇಸ್ವಾಮಿ, ನಿವೃತ್ತ ಉಪ ನಿರ್ದೇಶಕರು(ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ–11 ರಡಿಯಲ್ಲಿ ಪ್ರದತ್ತವಾದ ಅಧಿಕಾರಿಗಳನ್ನು ಚಲಾಯಿಸಿ, ಶ್ರೀ ಸುಭಾಷ್ ಟಿ.ಗೋಗಿ, ನಿವೃತ್ತ ಜಿಲ್ಲಾ ಮತ್ತು ಸೆಕ್ಷನ್ಸ್ ನ್ಯಾಯಾಧೀಶರು, ನಂ :45 (ಹಳೆಯ ನಂ :369) 8 ನೇ ಕ್ರಾಸ್, 2 ನೇ ಬ್ಲಾಕ್, ಆರ್.ಎಂ.ವಿ 2 ನೇ ಸ್ಟೇಜ್, 60 ಅಡಿ ರಸ್ತೆ, ಬೆಂಗಳೂರು–94, ಇವರನ್ನು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ನಿಯಮ–11(5)(ಸಿ) ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ, ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಿಸಿ ಆದೇಶಿಸಿದೆ.

ವಿಚಾರಣೆ ನಡೆಸಲು ಸ್ಥಳಾವಕಾಶ ಹಾಗೂ ಶೀಘ್ರಲಿಪಿಗಾರರ / ಬೆರಳಚ್ಚುಗಾರರ ಸೇವೆಯನ್ನು ವಿಚಾರಣಾಧಿಕಾರಿಗೆ ಒದಗಿಸಲು ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ, ಇವರಿಗೆ ಸೂಚಿಸಿದೆ. ವಿಚಾರಣಾಧಿಕಾರಿಗಳು ವಿಚಾರಣಾ ವರದಿ ಸಲ್ಲಿಸಿದ ನಂತರ ಅವರಿಗೆ ಸಂಭಾವನೆಯನ್ನು ಮತ್ತು ಸಾರಿಗೆ ಭತ್ಯೆಯನ್ನು ಸೇರಿದಂತೆ ಒಟ್ಟು ₹ 15,000/– (ರೂ ಹದಿನೈದು ಸಾವಿರ ಮಾತ್ರ) ಮಂಜೂರು ಮಾಡಲು ಸೂಚಿಸಿದೆ.

ವಿಚಾರಣಾಧಿಕಾರಿಗಳು ಪ್ರತಿ ಆರೋಪದ ಬಗ್ಗೆ ನಿಯಮಾನುಸಾರ ವಿಚಾರಣೆ ನಡೆಸಿ, ಸ್ಪಷ್ಟ ನಿರ್ಣಯಗಳನ್ನೊಳಗೊಂಡ ವಿಚಾರಣಾ ವರದಿಯನ್ನು ಈ ಆದೇಶ ತಲುಪಿದ 2 ತಿಂಗಳೊಳಗಾಗಿ ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ.ಪಟಗಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ,

**ಪಿ.ಆರ್. 1242**

**ಶಿಕ್ಷಣ ಸಚಿವಾಲಯ**

**ವಿಷಯ:** ಪರಿಶಿಷ್ಠ ಜಾತಿ / ಪರಿಶಿಷ್ಠ ಪಂಗಡದವರು ನಡೆಸುತ್ತಿರುವ ಸಾಸ್ವೆಹಳ್ಳಿಯ ಎ.ಡಿ.ವಿ.ಎಸ್. ಪ್ರಥಮ ದರ್ಜೆ ಕಾಲೇಜು ಹಾಗೂ ಅಲ್ಲಿನ ಬೋಧಕರ/ಬೋಧಕೇತರರ ಹುದ್ದೆಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು

**ಓದಲಾಗಿದೆ :**

1) ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 551 ಯುಪಿಸಿ 99 ದಿನಾಂಕ: 07–08–2003
2) ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 30 ಯುಪಿಸಿ 2008 ದಿನಾಂಕ:13–05–2009
3) ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 30 ಯುಪಿಸಿ 2008 ದಿನಾಂಕ: 05–10–2009
4) ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ:11:ವೇಅ/ಜಿಇಎ/ಶಿವಿ/2010–11/ನೇ.ವಿ., ದಿನಾಂಕ: 20–04–2011
5) ಸಚಿವ ಸಂಪುಟದ ಟಿಪ್ಪಣಿ ಸಂಖ್ಯೆ:ಸಿ:58/2012, ದಿನಾಂಕ:12–04–2012.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಅಧಿಸೂಚನೆಯನ್ವಯ ರಚಿಸಲಾದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ನಿಯಮ 8(1)ರನ್ವಯ ದಿನಾಂಕ: 01–06–1987ರ ನಂತರ ಪ್ರಾರಂಭಿಸಲಾದ ಯಾವುದೇ ಖಾಸಗಿ ಪದವಿ ಕಾಲೇಜುಗಳು ಮತ್ತು ವಿಷಯಗಳನ್ನು ಅನುದಾನದ ವ್ಯಾಪ್ತಿಗೆ ಒಳಪಡಿಸಲು ಅವಕಾಶವಿರುವುದಿಲ್ಲ.

ರಾಜ್ಯದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಗಳು ದಿನಾಂಕ:01–06–1987ರಿಂದ ದಿನಾಂಕ:31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲಾಗುತ್ತಿರುವ ಕಾಲೇಜುಗಳು ಮತ್ತು ಕೋರ್ಸ್‌ಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರ ತೀರ್ಮಾನಿಸಿ ಈ ಕುರಿತು ನಿಯಮಗಳನ್ನು ರಚಿಸಲು ದಿನಾಂಕ:18–02–2009ರಂದು ಜರುಗಿದ ಸಚಿವ ಸಂಪುಟ ಸಭೆಯು ಅನುಮೋದನೆ ನೀಡಿದೆ.

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಯಿಂದ ನಡೆಸಲ್ಪಡುತ್ತಿರುವ ಖಾಸಗಿ ಪದವಿ ಕಾಲೇಜುಗಳಿಗೆ ಸಂಬಂಧಿಸಿದಂತೆ ಮಾತ್ರ ಮೇಲೆ ಹೇಳಿದ ನಿಯಮ 8ಕ್ಕೆ ಸೂಕ್ತ ಸೇರ್ಪಡೆ ಮಾಡಿ ದಿನಾಂಕ: 01-06-87 ರಿಂದ 31-03-95ರ ಅವಧಿಯಲ್ಲಿ ಪ್ರಾರಂಭಿಸಲ್ಪಟ್ಟ ಪರಿಶಿಷ್ಠ ಜಾತಿ / ಪರಿಶಿಷ್ಠ ಪಂಗಡದವರು ನಡೆಸುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೊಳಪಡಿಸಲು ಓದಲಾದ (2)ರ ದಿನಾಂಕ: 13–05–2009ರ ಅಧಿಸೂಚನೆಯಲ್ಲಿ ಸೂಕ್ತ ತಿದ್ದುಪಡಿ ಮಾಡಿ ಅವಕಾಶ ಕಲ್ಪಿಸಲಾಗಿದೆ. ಅದರಂತೆ ಓದಲಾದ (3)ರ ದಿನಾಂಕ: 05–10–2009ರಲ್ಲಿ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ: 01–06–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರವು ಕೆಲವು ಮಾನದಂಡಗಳನ್ನು ನಿಗಧಿಪಡಿಸಿ ಆದೇಶ ಹೊರಡಿಸಿದೆ. ಮೇಲೆ ಓದಲಾದ(4)ರ ದಿನಾಂಕ: 20–04–2011ರ ಪ್ರಸ್ತಾವನೆಯಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಸದರಿ ಕಾಲೇಜಿನ ಯಾವ ಯಾವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ ವರ್ಗದವರನ್ನು ವೇತನಾನುದಾನಕ್ಕೆ ಒಳಪಡಿಸಬೇಕು ಎಂಬುದನ್ನು ಪರಿಶೀಲಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ. ಸದರಿ ಕಾಲೇಜನ್ನು ಹಾಗೂ ಅದರಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿತ್ತು. ಈಗಾಗಲೇ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ನಡೆಸುತ್ತಿರುವ 5 ಕಾಲೇಜುಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ವಿಧಿಸಲಾಗಿದ್ದ ಷರತ್ತುಗಳೊಂದಿಗೆ ಹೆಚ್ಚುವರಿಯಾಗಿ ಕೆಲವು ಷರತ್ತುಗಳನ್ನು ವಿಧಿಸಿ ಅವುಗಳನ್ನು ಪೂರೈಸಿದ್ದಲ್ಲಿ ಎರಡನೇ ಹಂತವಾಗಿ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಆರ್ಥಿಕ ಇಲಾಖೆಯು ತಿಳಿಸಿದೆ. ಆದರೆ, ಪ್ರಥಮ ಹಂತವಾಗಿ ವೇತನಾನುದಾನಕ್ಕೆ ಒಳಪಡಿಸಲಾದ 5 ಕಾಲೇಜುಗಳಿಗೆ ವಿಧಿಸದೇ ಇದ್ದ ಹೆಚ್ಚುವರಿ ಷರತ್ತುಗಳನ್ನು ವಿಧಿಸಿತ್ತು. ಈ ಹೆಚ್ಚುವರಿ ಷರತ್ತುಗಳನ್ನು ವಿಧಿಸದಂತೆ ವಿನಾಯಿತಿ ನೀಡುವಂತೆ ಸಚಿವ ಸಂಪುಟದ ಅನುಮೋದನೆ ಕೋರಲಾಗಿದ್ದು, ಸಚಿವ ಸಂಪುಟವು ಮೇಲೆ ಓದಲಾದ (5)ರಲ್ಲಿ ಆರ್ಥಿಕ ಇಲಾಖೆಯು ಹೆಚ್ಚುವರಿಯಾಗಿ ವಿಧಿಸಿರುವ ಷರತ್ತುಗಳನ್ನು ಸಡಿಲಿಸಿ, ಸದರಿ ಕಾಲೇಜು ಹಾಗೂ ಸದರಿ ಕಾಲೇಜಿನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರ್ಹ ಬೋಧಕ/ಬೋಧಕೇತರರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಅನುಮತಿ ನೀಡಿದೆ. ಅದರಂತೆ, ಕಾಲೇಜು ಶಿಕ್ಷಣ ನಿರ್ದೇಶನಾಲಯದ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಲಾದ ಅಭ್ಯರ್ಥಿಗಳ ವಿದ್ಯಾರ್ಹತೆ, ವಿಷಯಗಳ ಕಾರ್ಯಭಾರ ಮತ್ತು ಮೀಸಲಾತಿ ಪರಿಶೀಲಿಸಿ ಸದರಿ ಕಾಲೇಜನ್ನು ಮತ್ತು ಸದರಿ ಕಾಲೇಜಿನಲ್ಲಿ ವಿಷಯವಾರು ಹುದ್ದೆಗಳ ಎದುರು ಕಾರ್ಯ ನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರುಗಳನ್ನು/ಬೋಧಕೇತರ ನೌಕರರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಅನುದಾನದ ವ್ಯಾಪ್ತಿಗೆ ಒಳಪಡಿಸಲು ಸರ್ಕಾರ ತೀರ್ಮಾನಿಸಿದೆ.

ಆದ್ದರಿಂದ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಇಡಿ 105 ಯುಪಿಸಿ 2011 ಬೆಂಗಳೂರು ದಿನಾಂಕ: 19–04–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ: 01–06–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಸಾಸ್ವೆಹಳ್ಳಿಯ ಎ.ಡಿ.ವಿ.ಎಸ್. ಪ್ರಥಮ ದರ್ಜೆ ಕಾಲೇಜನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯದೊಂದಿಗೆ ಜಾರಿಗೆ ಬರುವಂತೆ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ.

ಸದರಿ ಕಾಲೇಜನ್ನು ವಿಷಯವಾರು ಹುದ್ದೆಗಳ ಎದುರು ಕಾರ್ಯ ನಿರ್ವಹಿಸುತ್ತಿರುವ ಕೆಳಕಂಡ ಅರ್ಹ ಸಹಾಯಕ ಪ್ರಾಧ್ಯಾಪಕರು ಹಾಗೂ ಅವರುಗಳು ಬೋಧಿಸುತ್ತಿರುವ ಹುದ್ದೆ / ವಿಷಯಗಳನ್ನು ಮತ್ತು ಬೋಧಕೇತರರನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ.

**ಬೋಧಕರು**

| ಕ್ರಮ ಸಂಖ್ಯೆ | ವೇತನಾನುದಾನಕ್ಕೆ ಒಳಪಡಿಸಿದ ಬೋಧಕರ ಹೆಸರು | ವೇತನಾನು ದಾನಕ್ಕೆ ಒಳಪಡಿಸಿದ ಹುದ್ದೆ / ವಿಷಯ | ಪರಿಗಣಿಸಲಾದ ಮೀಸಲಾತಿ | ವೇತನಾನು ದಾನಕ್ಕೆ ಒಳಪಡಿಸಿದ ಹುದ್ದೆಗಳ ಸಂಖ್ಯೆ | ಕಾರ್ಯ ಭಾರ | ವೇತನ ಶ್ರೇಣಿ |
|---|---|---|---|---|---|---|
| 1 | ವನಜಾಕ್ಷಮ್ಮ, | ಇತಿಹಾಸ ಉಪನ್ಯಾಸಕರು | ಅನ್ವಯಿ ಸುವುದಿಲ್ಲ | 01 | 22ಗಂಟೆ | ರಾಜ್ಯ |
| 2 | ಹನುಮಂತಪ್ಪ.ಎಂ.ಬಿ., | ರಾಜ್ಯಶಾಸ್ತ್ರ ಉಪನ್ಯಾಸಕರು | ಅನ್ವಯಿ ಸುವುದಿಲ್ಲ | 01 | 22ಗಂಟೆ | ಯುಜಿಸಿ |
| 3 | ಬಸವರಾಜಪ್ಪ.ಕೆ.ಹಚ್. | ಅರ್ಥಶಾಸ್ತ್ರ ಉಪನ್ಯಾಸಕರು | ಅನ್ವಯಿ ಸುವುದಿಲ್ಲ | 01 | 22ಗಂಟೆ | ರಾಜ್ಯ |

| ಕ್ರಮ ಸಂಖ್ಯೆ | ವೇತನಾನುದಾನಕ್ಕೆ ಒಳಪಡಿಸಿದ ಬೋಧಕರ ಹೆಸರು | ವೇತನಾನು ದಾನಕ್ಕೆ ಒಳಪಡಿಸಿದ ಹುದ್ದೆ / ವಿಷಯ | ಪರಿಗಣಿಸಲಾದ ಮೀಸಲಾತಿ | ವೇತನಾನು ದಾನಕ್ಕೆ ಒಳಪಡಿಸಿದ ಹುದ್ದೆಗಳ ಸಂಖ್ಯೆ | ಕಾರ್ಯ ಭಾರ | ವೇತನ ಶ್ರೇಣಿ |
|---|---|---|---|---|---|---|
| 4 | ಗಣಪತಿ.ಹೆಚ್.ಬಿ., | ಸಮಾಜಶಾಸ್ತ್ರ ಉಪನ್ಯಾಸಕರು | ಅನ್ವಯಿ ಸುವುದಿಲ್ಲ | 01 | 22ಗಂಟೆ | ಯುಜಿಸಿ |
| 5 | ಹರೀಶ್.ಕೆ.ಎಂ., | ದೈಹಿಕ ಶಿಕ್ಷಣ ಶಿಕ್ಷಕರು | ಅನ್ವಯಿ ಸುವುದಿಲ್ಲ | 01 | – | ಯುಜಿಸಿ |
| 6 | ಶಂಕ್ರಪ್ಪ, | ಗ್ರಂಥಪಾಲಕರು | ಅನ್ವಯಿ ಸುವುದಿಲ್ಲ | 01 | – | ಯುಜಿಸಿ |

**ಬೋಧಕೇತರರು**

| ಕ್ರಮ ಸಂಖ್ಯೆ | ವೇತನಾನುದಾನಕ್ಕೆ ಒಳಪಡಿಸಿದ ಬೋಧಕೇತರರ ಹೆಸರು | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆ |
|---|---|---|
| 1 | ಜಯಪ್ಪ.ಪಿ.ಎಂ., | ಅಧೀಕ್ಷಕರು |
| 2 | ರೂಪೇಶ್ ಕುಮಾರ್, | ಪ್ರ.ದ.ಸಹಾಯಕರು |
| 3 | ಬೆನಕೇಶ್.ಎಸ್.ಕೆ., | ದ್ವಿ.ದ.ಸಹಾಯಕರು |
| 4 | ವೆಂಕಟೇಶ್ ರಾಥೋಡ್, | ದ್ವಿ.ದ.ಸಹಾಯಕರು |
| 5 | ದಾಕ್ಷಾಯಣಮ್ಮ, | ದ್ವಿತೀಯ ದರ್ಜೆ ಬೆರಳಚ್ಚುಗಾರರು |
| 6 | ಜಗದೀಶಪ್ಪ.ಎಸ್., | ಗ್ರಂಥಾಲಯ ಸಹಾಯಕರು |
| 7 | ವಾಸುದೇವಪ್ಪ.ಕೆ., | ಅಟೆಂಡರ್ |
| 8 | ಹೊರಕೇರಪ್ಪ, | ಅಟೆಂಡರ್ |
| 9 | ಸೈಯದ್ ಖುರ್ಬತ್‌ವುಲ್ಲಾ, | ಪರಿಚಾರಕರು. |
| 10 | ಶ್ರೀನಿವಾಸ.ಟಿ.ಪೂಜಾರ್, | ಪರಿಚಾರಕರು. |
| 11 | ನಸ್ರೀನ್ ತಾಜ್, | ಪರಿಚಾರಕರು. |

1. ಒಂದು ವೇಳೆ ಈ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಟ್ಟ ಬೋಧಕರು/ಬೋಧಕೇತರರುಗಳ ಪೈಕಿ ಯಾವುದೇ ಅನರ್ಹತೆ ಕಂಡು ಬಂದಲ್ಲಿ ಯಾವುದೇ ಮುನ್ಸೂಚನೆಯಿಲ್ಲದೆ, ವೇತನಾನುದಾನವನ್ನು ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.

2. ಈ ನೇಮಕಾತಿಗಳಲ್ಲಿ ಮೀಸಲಾತಿಯಲ್ಲಿ ವ್ಯತ್ಯಾಸವಾಗಿರುವುದು ಕಂಡುಬಂದಲ್ಲಿ ಅಂಥವರ ವೇತನಾನುದಾನವನ್ನು ಸಹ ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.

3. ವೇತನಾನುದಾನದ ವ್ಯಾಪ್ತಿಗೆ ಒಳಪಟ್ಟಂತಹ ಮೇಲ್ಕಂಡ ಉಪನ್ಯಾಸಕರು/ಬೋಧಕೇತರರುಗಳ ವೇತನವನ್ನು ಆದೇಶ ಹೊರಡಿಸಿದ ದಿನಾಂಕದಿಂದ ವಿಸ್ತರಿಸಿರುವ ವೇತನ ಶ್ರೇಣಿಯ ಕನಿಷ್ಠ ಮೂಲ ವೇತನದಲ್ಲಿ ನಿಗದಿ ಪಡಿಸತಕ್ಕದ್ದು. ಹಾಗೂ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲಾದ ಪೂರ್ವದಲ್ಲಿ ಸಲ್ಲಿಸಿರುವ ಸೇವೆಯನ್ನು ಯಾವುದೇ ಸೇವಾ ಹಾಗೂ ಪಿಂಚಣಿ ಸೌಲಭ್ಯಗಳಿಗೆ ಪರಿಗಣಿಸುವಂತಿಲ್ಲ.

4. ದಿನಾಂಕ:11–07–2009ರ ಪೂರ್ವದಲ್ಲಿ ನೇಮಕಾತಿ ಹೊಂದಿದವರು ಎಂ.ಫಿಲ್. ಪದವಿ ಹೊಂದಿದ್ದಲ್ಲಿ ಯುಜಿಸಿ ವೇತನ ಶ್ರೇಣಿ ನೀಡಲು ಪರಿಗಣಿಸಲಾಗುತ್ತಿದೆ. ಆದರೆ, ಈ ಪ್ರಕರಣದಲ್ಲಿ ಬಹುತೇಕ ಉಪನ್ಯಾಸಕರುಗಳು ದಿನಾಂಕ:11–07–2009ರ ಪೂರ್ವದಲ್ಲಿ ನಡೆದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದು, ಅವರುಗಳ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ವಿಶ್ವವಿದ್ಯಾಲಯಗಳು ದಿನಾಂಕ:11–07–2009ರ ನಂತರ ವಿತರಿಸಿದೆ. ಈ ಹಿನ್ನೆಲೆಯಲ್ಲಿ ಅವರುಗಳಿಗೆ ಯುಜಿಸಿ ವೇತನ ಶ್ರೇಣಿ ವಿಸ್ತರಿಸುವ ಸಂಬಂಧ ಯಾವ ದಿನಾಂಕವನ್ನು ಅಂದರೆ ಪರೀಕ್ಷೆ ನಡೆದ ದಿನಾಂಕ ಅಥವಾ ಪ್ರಮಾಣ ಪತ್ರ ವಿತರಿಸಿರುವ ದಿನಾಂಕ ಈ ಎರಡರಲ್ಲಿ ಯಾವ ದಿನಾಂಕ ಪರಿಗಣಿಸಬೇಕು ಎಂಬುದರ

ಕುರಿತು ಇಂತಹ ಬೇರೆ ಪ್ರಕರಣಗಳಲ್ಲಿ ಸಿಆಸು ಇಲಾಖೆ / ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಲಾಗುತ್ತಿದೆ. ಆದುದರಿಂದ, ಒಂದು ವೇಳೆ ಸರ್ಕಾರವು ವೇತದಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರುಗಳ ಎಂ.ಫಿಲ್. ವಿದ್ಯಾರ್ಹತೆಯನ್ನು ಪ್ರಮಾಣ ಪತ್ರ ವಿತರಿಸಿರುವ ದಿನಾಂಕದಿಂದ ಪರಿಗಣಿಸುವಂತೆ ನಿರ್ಧಾರ ಕೈಗೊಂಡಲ್ಲಿ ಯುಜಿಸಿ ವೇತನ ಶ್ರೇಣಿ ಹಿಂದಕ್ಕೆ ಪಡೆದು ಅಂತಹ ಉಪನ್ಯಾಸಕರುಗಳಿಗೆ ರಾಜ್ಯ ವೇತನ ಶ್ರೇಣಿಯಲ್ಲಿ ವೇತನ ಪುನರ್ ಪರಿಷ್ಕರಿಸುವ ಷರತ್ತಿಗೊಳಪಟ್ಟಿರುತ್ತದೆ.

5. ವೇತನಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರುಗಳ ಕಾರ್ಯಭಾರದಲ್ಲಿ ಕೊರತೆ ಉದ್ಭವಿಸಿದ ಪಕ್ಷದಲ್ಲಿ ಅಂತಹ ಉಪನ್ಯಾಸಕರುಗಳನ್ನು ಕಾರ್ಯಭಾರ ಇರುವಂತಹ ಅನುದಾನಿತ ಕಾಲೇಜು / ಸರ್ಕಾರಿ ಕಾಲೇಜುಗಳ ಕಾರ್ಯಭಾರದ ಎದುರಾಗಿ ನಿಯೋಜನೆ ಮೇಲೆ ಮರು ಹಂಚಿಕೆ ಮಾಡುವ ಷರತ್ತಿಗೊಳಪಟ್ಟಿದೆ.

6. ಸಂಸ್ಥೆಯ ಬೈಲಾದಲ್ಲಿ ನಿಗಧಿಪಡಿಸಿರುವಂತೆ ಆಡಳಿತ ಮಂಡಳಿಯ ಎಲ್ಲಾ ಪದಾಧಿಕಾರಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರೇ ಆಗಿರಬೇಕು. ಒಂದು ವೇಳೆ ಅನ್ಯ ವರ್ಗದ ವ್ಯಕ್ತಿಯನ್ನು ಆಡಳಿತ ಮಂಡಳಿಯ ಪದಾಧಿಕಾರಿಗಳಾಗಿ ಆಯ್ಕೆ ಮಾಡಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

7. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು, 2003ರ ನಿಯಮ 15(ಇ)ರಡಿಯಲ್ಲಿ ನಿಗದಿಪಡಿಸಿರುವ ಅಪೆಂಡಿಕ್ಸ್ (2)ರಲ್ಲಿ ಸೂಚಿಸಿರುವಂತೆ ಬೋಧನಾ ಕೊಠಡಿಗಳು, ಪ್ರಯೋಗಾಲಯಗಳು, ಶೌಚಾಲಯ ಇತ್ಯಾದಿಗಳನ್ನು ಒಳಗೊಂಡ ಮೂಲಭೂತ ಸೌಕರ್ಯಗಳನ್ನು ಸಂಸ್ಥೆಯು ಒದಗಿಸಿರತಕ್ಕದ್ದು.

8. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಸಂದರ್ಭದಲ್ಲಿ ಅಂತಹ ಕಾಲೇಜುಗಳಲ್ಲಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಕನಿಷ್ಠ ಶೇಕಡಾ 35ರಷ್ಟು ಇರತಕ್ಕದ್ದು. ಪ್ರವೇಶಾವಕಾಶದಲ್ಲಿ ನಿಗದಿಪಡಿಸಿರುವ ವಿದ್ಯಾರ್ಥಿಗಳ ಕನಿಷ್ಠ ಪ್ರಮಾಣವನ್ನು ವಿವರವಾಗಿ ಅನುಸರಿಸತಕ್ಕದ್ದು. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

9. ವಿಶ್ವವಿದ್ಯಾಲಯದವರು ನಿಗದಿಪಡಿಸಿರುವ ಸರಾಸರಿ ಪ್ರವೇಶಾತಿಗೆ ಸಮಾನಾಂತರವಾಗಿ ಈ ಕಾಲೇಜುಗಳು ಕನಿಷ್ಠ ಪ್ರವೇಶಾತಿಯನ್ನು ಮಾಡಿಕೊಳ್ಳತಕ್ಕದ್ದು ಮತ್ತು ಪ್ರವೇಶಾತಿ (enrollment) ಪಡೆದ ಕಾಲೇಜಿನ ವಿದ್ಯಾರ್ಥಿಗಳ ಪೈಕಿ ಕನಿಷ್ಠ ಶೇಕಡ 75ರಷ್ಟು ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತುಕೊಳ್ಳುವಂತೆ ಕ್ರಮವಹಿಸತಕ್ಕದ್ದು. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

10. ಇಂತಹ ಕಾಲೇಜುಗಳಲ್ಲಿನ ಪರೀಕ್ಷಾ ಫಲಿತಾಂಶಗಳು ಸಂಬಂಧಪಟ್ಟ ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ಇತರೆ ಕಾಲೇಜುಗಳಲ್ಲಿನ ಸರಾಸರಿ ಫಲಿತಾಂಶಕ್ಕಿಂತ ಕಡಿಮೆ ಇರತಕ್ಕದಲ್ಲ. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

11. ಈ ರೀತಿ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆದು ಪ್ರಾರಂಭವಾದ ಪದವಿ ಕಾಲೇಜುಗಳನ್ನು ಮಧ್ಯದಲ್ಲಿ ಯಾವುದೇ ವಿಚ್ಛಿನ್ನತೆ ಇಲ್ಲದೆ ಸತತವಾಗಿ ನಡೆಸಿರಬೇಕು. ವಿಚ್ಛಿನ್ನತೆ ಉಂಟಾದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.]

12. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ಮತ್ತು ಇತರ ಸಂಬಂಧಿತ ನಿಯಮಗಳಡಿಯಲ್ಲಿ ನಿಗಧಿಪಡಿಸಿರುವಂತೆ ಮಾದರಿ ಸಿಬ್ಬಂದಿಯನ್ವಯ ನೇಮಕಾತಿ ಮಾಡಿಕೊಳ್ಳತಕ್ಕದ್ದು. ಪ್ರತಿಯೊಂದು ತರಗತಿಯಲ್ಲಿ ನಿಗಧಿತ ಕನಿಷ್ಠ ಮಟ್ಟದ ವಿದ್ಯಾರ್ಥಿ ಹಾಜರಾತಿ ಸಂಖ್ಯಾಬಲವನ್ನು ಹೊಂದಿರತಕ್ಕದ್ದು. ಪದವಿ ಕಾಲೇಜುಗಳಿಗೆ ಸಂಬಂಧಪಟ್ಟಂತೆ ಪ್ರತಿಯೊಂದು ತರಗತಿಯಲ್ಲಿ ಕನಿಷ್ಠ 40 ವಿದ್ಯಾರ್ಥಿಗಳ ಹಾಜರಾತಿ ಕಡ್ಡಾಯವಾಗಿರಬೇಕು. ಭಾಷಾ ವಿಷಯದಲ್ಲಿ ಕನಿಷ್ಠ 10 ವಿದ್ಯಾರ್ಥಿಗಳು ಹಾಗೂ ಐಚ್ಛಿಕ ವಿಷಯಗಳಿಗೆ ಕನಿಷ್ಠ 15 ವಿದ್ಯಾರ್ಥಿಗಳ ಸಂಖ್ಯೆ ಇರಬೇಕು.

13. ನಿಗಧಿತ ಮೂಲಭೂತ ಸೌಲಭ್ಯಗಳಲ್ಲದೆ ಸ್ವಂತ ಕಟ್ಟಡ ಮತ್ತು ಆಟದ ಮೈದಾನಗಳನ್ನು ಹೊಂದಿರತಕ್ಕದ್ದು. ಇವುಗಳನ್ನು ಹೊಂದದೇ ಇರುವ ಸಂಸ್ಥೆಗಳ ಪ್ರಕರಣಗಳಲ್ಲಿ ಈ ಮೂಲಭೂತ ಸೌಲಭ್ಯಗಳನ್ನು ಹೊಂದಲು ಸಹಾಯಾನುದಾನಕ್ಕೆ ಒಳಪಡಿಸಿದ ದಿನಾಂಕದಿಂದ ಮೂರು ವರ್ಷಗಳ ಕಾಲಾವಕಾಶ ನೀಡಬಹುದು. ಹಾಗೂ ಮೂರು ವರ್ಷಗಳ ನಂತರವೂ ಈ ಸೌಲಭ್ಯಗಳನ್ನು ಒದಗಿಸದೇ ಇದ್ದಲ್ಲಿ ಸಹಾಯಾನುದಾನವನ್ನು ನಿಲ್ಲಿಸಲಾಗುವುದು.

14. ಇನ್ನು ಮುಂದೆ ಭವಿಷ್ಯಾನುಸಾರ ಭರ್ತಿ ಮಾಡಬೇಕಾಗಿರುವ ಹುದ್ದೆಗಳಿಗೆ ಸಕ್ಷಮ ಅಧಿಕಾರಿಯಿಂದ ಪೂರ್ವಾನುಮತಿ ಪಡೆಯದೇ ಮಾಡತಕ್ಕದ್ದಲ್ಲ.

15. ನೇರ ನೇಮಕಾತಿ, ಬಡ್ತಿ ಮತ್ತು ವಿದ್ಯಾರ್ಥಿಗಳ ಪ್ರವೇಶದ ವಿಷಯದಲ್ಲಿ ಕಾಲಕಾಲಕ್ಕೆ ಹೊರಡಿಸುವ ಸರ್ಕಾರದ ನಿಯಮಗಳು/ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

16. ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾದ ಬೋಧಕ/ಬೋಧಕೇತರ ಹುದ್ದೆಗಳನ್ನು ತುಂಬುವಾಗ ಸರ್ಕಾರದ ಪೂರ್ವಾನುಮತಿ ಪಡೆಯುವುದು ಮತ್ತು ಸರ್ಕಾರದ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

17. ಅನುಮೋದಿತ ಹುದ್ದೆಗಳಿಗೆ ವೇತನಾನುದಾನ ಬಿಡುಗಡೆ ಮಾಡುವ ಮುನ್ನ ಸರ್ಕಾರದ ಮತ್ತು ಯುಜಿಸಿ ನಿಯಮಗಳ ಪ್ರಕಾರ ವಯೋಮಿತಿ : ವಿದ್ಯಾರ್ಹತೆ ಮತ್ತಿತರ ಷರತ್ತುಗಳನ್ನು ಪೂರೈಸಿರುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.

18. ಸದರಿ ಕಾಲೇಜಿನಲ್ಲಿ ವೇತನಾನುದಾನಕ್ಕೆ ಒಳಪಡಿಸಲಾಗಿರುವಂತಹ ಬೋಧಕರ/ಬೋಧಕೇತರರ ವೇತನವನ್ನು ಪ್ರಥಮ 5 ವರ್ಷಗಳ ಅವಧಿಗೆ ಇಲಾಖೆಗೆ ನಿಗದಿ ಪಡಿಸಲಾದ ಯೋಜನೆ ಹಂಚಿಕೆಯಲ್ಲಿಯೇ ವೆಚ್ಚ ಭರಿಸತಕ್ಕದ್ದು.

ಪ್ರತೀ ವರ್ಷವೂ ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವ ಕುರಿತು ಸಂಬಂಧಪಟ್ಟ ಜಂಟಿ ನಿರ್ದೇಶಕರು ದೃಢೀಕರಿಸಿದ ನಂತರವೇ ಆಯಾ ವರ್ಷದ ವೇತನಾನುದಾನ ಬಿಡುಗಡೆ ಮಾಡುವಂತೆ ಆಯುಕ್ತಾಲಯಕ್ಕೆ ಸೂಚಿಸಲಾಗಿದೆ. ನ್ಯೂನ್ಯತೆಗಳಾದಲ್ಲಿ ಸಂಬಂಧಪಟ್ಟ ಜಂಟಿ ನಿರ್ದೇಶಕರೇ ಜವಾಬ್ದಾರರಾಗಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ:742/ವೆಚ್ಚ–8/2011, ದಿನಾಂಕ:13–01–2012 ರಲ್ಲಿ ಹಾಗೂ ಸಚಿವ ಸಂಪುಟ ಟಿಪ್ಪಣಿ ಸಂಖ್ಯೆ:58/2012, ದಿನಾಂಕ:12–04–2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಯು.ಬಿ. ಉಳವಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ).

**ಪಿ.ಆರ್. 1261**

## ಶಿಕ್ಷಣ ಸಚಿವಾಲಯ

**ವಿಷಯ:** ರಾಜ್ಯದ ಸರ್ಕಾರಿ/ಅನುದಾನಿತ ಪ್ರಾಥಮಿಕ, ಪ್ರೌಢಶಾಲಾ ಮತ್ತು ಪದವಿ ಪೂರ್ವ ಶಿಕ್ಷಣ ಉಪನ್ಯಾಸಕರಿಗೆ, ಸಹ ಶಿಕ್ಷಕರಿಗೆ ವಿಶೇಷ ಭತ್ಯೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1] ಸರ್ಕಾರಿ ಆದೇಶ ಸಂಖ್ಯೆ. ಎಫ್‌ಡಿ 8 ಎಸ್ ಆರ್ ಪಿ 2006, ದಿನಾಂಕ:29–03–2006.
2] ಸರ್ಕಾರಿ ಆದೇಶ ಸಂಖ್ಯೆ. ಎಫ್‌ಡಿ 14 ಎಸ್ ಆರ್ ಪಿ 2006, ದಿನಾಂಕ:12–05–2006.
3] ಸರ್ಕಾರಿ ಆದೇಶ ಸಂಖ್ಯೆ. ಎಫ್‌ಡಿ 31 ಎಸ್ ಆರ್ ಪಿ 2007, ದಿನಾಂಕ:28–08–2008.
4] ಸರ್ಕಾರಿ ಆದೇಶ ಸಂಖ್ಯೆ. ಎಫ್‌ಡಿ 31 ಎಸ್ ಆರ್ ಪಿ 2007, ದಿನಾಂಕ:29–08–2008.

**ಪ್ರಸ್ತಾವನೆ :**

ಮೇಲೆ [1] ರಲ್ಲಿ ಓದಲಾದ ದಿನಾಂಕ:29–03–2006ರ ಸರ್ಕಾರದ ಆದೇಶದಲ್ಲಿ 5ನೇ ರಾಜ್ಯ ವೇತನ ಆಯೋಗದ ಮಧ್ಯಂತರ ವರದಿಯಲ್ಲಿ ಮಾಡಿರುವ ಶಿಫಾರಸ್ಸಿನನ್ವಯ ಅನುದಾನಿತ ಮತ್ತು ಸ್ಥಳೀಯ ಸಂಸ್ಥೆಗಳ ಪ್ರಾಥಮಿಕ ಶಾಲಾ ಶಿಕ್ಷಕರು ಸೇರಿದಂತೆ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಮಾಸಿಕ 200–00 ರೂ.ಗಳ ವಿಶೇಷ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಮೇಲೆ [2] ರಲ್ಲಿ ಓದಲಾದ ದಿನಾಂಕ;12–05–2006ರ ಸರ್ಕಾರದ ಆದೇಶದಲ್ಲಿ ಅನುದಾನಿತ ಶಿಕ್ಷಣ ಸಂಸ್ಥೆಗಳ ಮತ್ತು ಸ್ಥಳೀಯ ಸಂಸ್ಥೆಗಳ ಪ್ರೌಢಶಾಲಾ ಶಿಕ್ಷಕರು ಸೇರಿದಂತೆ ರಾಜ್ಯ ಪ್ರೌಢಶಾಲಾ ಶಿಕ್ಷಕರಿಗೆ ಮತ್ತು ಅನುದಾನಿತ ಹಾಗೂ ಸ್ಥಳೀಯ ಸಂಸ್ಥೆಗಳ ಉಪನ್ಯಾಸಕರು ಸೇರಿದಂತೆ ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರುಗಳಿಗೆ ಮಾಸಿಕ 200–00 ರೂ. ಗಳ ವಿಶೇಷ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಮೇಲೆ [3] ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 5ನೇ ರಾಜ್ಯ ವೇತನ ಆಯೋಗದ ಅಂತಿಮ ವರದಿಯಲ್ಲಿನ 2ನೇ ಸಂಪುಟದಲ್ಲಿ ಮಾಡಿರುವ ಶಿಫಾರಸ್ಸಿನಂತೆ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ದಿನಾಂಕ:01–08–2008ರ ಪೂರ್ವದಲ್ಲಿ ನೇಮಕಾತಿ ಹೊಂದಿದ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ದಿನಾಂಕ:29–03–2006ರ ಸರ್ಕಾರದ ಆದೇಶದಲ್ಲಿ ಮಂಜೂರು ಮಾಡಿರುವ ರೂ. 200–00 ರೂ.ಗಳ ವಿಶೇಷ ಭತ್ಯೆಯನ್ನು ಮುಂದುವರೆಸಿದ್ದು, ದಿನಾಂಕ:01–08–2008ರ ನಂತರ ನೇಮಕಾತಿ ಹೊಂದಿರುವ ಪ್ರಾಥಮಿಕ ಶಾಲಾ ಸಹ ಶಿಕ್ಷಕರು 200–00 ರೂ.ಗಳ ಮಾಸಿಕ ವಿಶೇಷ ಭತ್ಯೆಯನ್ನು ಪಡೆಯಲು ಅರ್ಹರಿರುವುದಿಲ್ಲ. ದಿನಾಂಕ:12–05–2006ರ ಸರ್ಕಾರದ ಆದೇಶದಲ್ಲಿ 200–00 ರೂ.ಗಳ ಮಾಸಿಕ ವಿಶೇಷ ಭತ್ಯೆಯನ್ನು ಪ್ರಸ್ತುತ ಈ ಸೌಲಭ್ಯವನ್ನು ಪಡೆಯುತ್ತಿರುವ ಶಿಕ್ಷಕರುಗಳಿಗೆ ಮಾತ್ರ ಮುಂದುವರೆಸಲಾಗಿದೆ.

ಪ್ರಸ್ತುತ ರಾಜ್ಯದ 6ನೇ ವೇತನ ಆಯೋಗದ ಅಧಿಕಾರಿ ವೇತನ ಸಮಿತಿಯ ಶಿಫಾರಸ್ಸಿನಂತೆ ಪರಿಷ್ಕೃತ ವೇತನವನ್ನು ನಿಗದಿಪಡಿಸಲಾಗಿದ್ದು, ಕರ್ನಾಟಕ ಸಿವಿಲ್ ಸೇವೆಗಳ [ಪರಿಷ್ಕೃತ ವೇತನ] ನಿಯಮಗಳು 2012 ರಲ್ಲಿ ಸರ್ಕಾರಿ ಹಾಗೂ ಅನುದಾನಿತ ಪ್ರಾಥಮಿಕ, ಪ್ರೌಢ ಮತ್ತು ಪದವಿ ಪೂರ್ವ ಕಾಲೇಜಿನ ಶಿಕ್ಷಕರು/ಉಪನ್ಯಾಸಕರುಗಳಿಗೆ ಪರಿಷ್ಕೃತ ವೇತನವನ್ನು ನಿಗದಿಪಡಿಸಲಾಗಿದ್ದು, ಈ ಪರಿಷ್ಕೃತ ವೇತನದಲ್ಲಿ ಇವರ ಬೇಡಿಕೆಯನ್ನು ಪೂರ್ಣವಾಗಿ ಪರಿಗಣಿಸದೇ ಇರುವ ಹಿನ್ನಲೆಯಲ್ಲಿ, ಈ ವರ್ಗದವರಿಗೆ ವಿಶೇಷ ಭತ್ಯೆಯನ್ನು ನೀಡುವ ಬಗ್ಗೆ ಮಾನ್ಯ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ನಿರ್ಣಯಿಸಲಾಗಿದ್ದು, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 264 ಎಸ್‌ಎಲ್‌ಬಿ 2012, ಬೆಂಗಳೂರು, ದಿನಾಂಕ 09ನೇ ಮೇ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದ ಸರ್ಕಾರಿ/ಅನುದಾನಿತ ಪ್ರಾಥಮಿಕ, ಪ್ರೌಢ ಮತ್ತು ಪದವಿ ಪೂರ್ವ ಕಾಲೇಜುಗಳಲ್ಲಿನ ಶಿಕ್ಷಕರು/ಉಪನ್ಯಾಸಕರುಗಳಿಗೆ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ, ಕೆಳಕಂಡಂತೆ ಮಾಸಿಕ ವಿಶೇಷ ಭತ್ಯೆಯನ್ನು ಪರಿಷ್ಕರಿಸಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಶಿಕ್ಷಕರ/ಉಪನ್ಯಾಸಕರ ವಿವರ | ಪ್ರಸ್ತುತ ಪಡೆಯುತ್ತಿರುವ ಮಾಸಿಕ ವಿಶೇಷ ಭತ್ಯೆ ರೂ.ಗಳಲ್ಲಿ | ಪ್ರಸ್ತುತ ಪರಿಷ್ಕರಿಸಲಾದ ಮಾಸಿಕ ವಿಶೇಷ ಭತ್ಯೆ ರೂ.ಗಳಲ್ಲಿ |
|---|---|---|---|
| 01 | ಸರ್ಕಾರಿ/ ಅನುದಾನಿತ ಪ್ರಾಥಮಿಕ ಶಾಲಾ ಶಿಕ್ಷಕರು. | 200–00 | 300–00 |
| 02 | ಸರ್ಕಾರಿ/ ಅನುದಾನಿತ ಪ್ರೌಢ ಶಾಲಾ ಸಹ ಶಿಕ್ಷಕರು. | 200–00 | 400–00 |
| 03 | ಸರ್ಕಾರಿ/ ಅನುದಾನಿತ ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರು. | 200–00 | 500–00 |

ಈ ಆದೇಶದ ಮೂಲಕ ಮಂಜೂರಾದ ವಿಶೇಷ ಭತ್ಯೆಯ ಮೊತ್ತವು ವಿಶಿಷ್ಟ ಸಂಭಾವನೆಯಾಗಿದ್ದು, ಇದನ್ನು ನಿವೃತ್ತಿ ಸೌಲಭ್ಯವನ್ನು ನಿರ್ಧರಿಸುವಾಗ ಅಥವಾ ಬೇರೆ ಯಾವುದೇ ಉದ್ದೇಶಗಳಿಗೆ ಪರಿಗಣಿಸತಕ್ಕದ್ದಲ್ಲ.

ಈ ವಿಶೇಷ ಭತ್ಯೆಯ ವೆಚ್ಚವನ್ನು, ವೇತನ ವೆಚ್ಚವನ್ನು ಭರಿಸುವ ಲೆಕ್ಕ ಶೀರ್ಷಿಕೆಯಿಂದಲೇ ಭರಿಸತಕ್ಕದ್ದು.

ಈ ವಿಶೇಷ ಭತ್ಯೆಯನ್ನು ಪ್ರಸ್ತುತ ಈ ಸೌಲಭ್ಯವನ್ನು ಪಡೆಯುತ್ತಿರುವ ಶಿಕ್ಷಕರು/ಉಪನ್ಯಾಸಕರುಗಳಿಗೆ ಮಾತ್ರ ಅನ್ವಯವಾಗುವಂತೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ. ಆ.ಇ. 2146 ಪ್ರ.ಕಾ. 2012, ದಿನಾಂಕ:09–05–2012 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಟಿ.ಜಯರಾಂ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ. [ಪ್ರೌಢ]

**ಪಿ.ಆರ್. 1413**

## ವಸತಿ ಸಚಿವಾಲಯ

**ವಿಷಯ:** "ನನ್ನ ಮನೆ ನನ್ನ ಸ್ವತ್ತು" ಯೋಜನೆಯಡಿ ಸಾಲ ವಸೂಲಾತಿ ಮಾಡಿ ವಾಸವಿರುವ ಅರ್ಹ ಫಲಾನುಭವಿಗಳಿಗೆ ಮನೆ ಹಂಚಿಕೆ ಮಾಡುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ:ವಇ 76 ಹೆಚ್‌ಎಎಂ 2010, ದಿನಾಂಕ:13.04.2010.
2. ಸರ್ಕಾರದ ಆದೇಶ ಸಂಖ್ಯೆ:ವಇ 20 ಹೆಚ್‌ಎಹೆಚ್ 2011, ದಿನಾಂಕ:20.06.2011.
3. ಸರ್ಕಾರದ ಪತ್ರ ಸಂಖ್ಯೆ:ವಇ 20 ಹೆಚ್‌ಎಹೆಚ್ 2011(ಭಾ2),ದಿನಾಂಕ:21.04.2012.
4. ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಪ್ರಸ್ತಾವನೆ ಪತ್ರ ಸಂಖ್ಯೆ:ಎಂಡಿ ಆರ್‌ಜಿಆರ್‌ಹೆಚ್‌ಸಿಎಲ್ 01 ಎಸ್‌ಡಿ 12 2011, ದಿನಾಂಕ:01.02.2012.
5. ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಪ್ರಸ್ತಾವನೆ ಪತ್ರ ಸಂಖ್ಯೆ:ಜಿಎಂ ಆರ್‌ಜಿಆರ್‌ಹೆಚ್‌ಸಿಎಲ್ 01 ಎಸ್‌ಡಿ 32 2011, ದಿನಾಂಕ:26.03.2012.

ಪ್ರಸ್ತಾವನೆ:

ಓದಲಾಗಿರುವ ಸರ್ಕಾರದ ಆದೇಶ (1)ರಲ್ಲಿ ಸರ್ಕಾರವು 2010–11ನೇ ಸಾಲಿನ ಆಯವ್ಯಯದ ಘೋಷಣೆಯಂತೆ ಆಶ್ರಯ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣಕ್ಕಾಗಿ ನೀಡಿದ ಸಾಲವನ್ನು ದಿನಾಂಕ: 31.12.2010ರೊಳಗೆ ಅಸಲು ಕಂತನ್ನು ಮರುಪಾವತಿಸಿದ ಫಲಾನುಭವಿಗಳಿಗೆ ಸಾಲದ ಮೇಲಿನ ಬಡ್ಡಿಯನ್ನು ಮನ್ನಾ ಮಾಡಲು ಅನುಮೋದನೆ ನೀಡಲಾಗಿತ್ತು.

ಓದಲಾಗಿರುವ ಸರ್ಕಾರದ ಆದೇಶ (2)ರಲ್ಲಿ 2011–12ನೇ ಸಾಲಿನ ಆಯವ್ಯಯದಲ್ಲಿ "ನನ್ನ ಮನೆ ನನ್ನ ಸ್ವತ್ತು" ಯೋಜನೆಯನ್ನು ಘೋಷಣೆ ಮಾಡಿರುವ ಹಿನ್ನಲೆಯಲ್ಲಿ ಆಶ್ರಯ, ಜನತಾ ಮನೆಗಳು, ಭಾಗ್ಯ ಮಂದಿರ, ನೆರಳಿನ ಭಾಗ್ಯ, ಗ್ರಾಮೀಣ ಆಶ್ರಯ, ನಗರ ಆಶ್ರಯ, ಗ್ರಾಮೀಣ ಅಂಬೇಡ್ಕರ್, ನಗರ ಅಂಬೇಡ್ಕರ್, ಪಿಎಂಜಿವೈ, ಇಂದಿರಾ ಆವಾಸ್ ಯೋಜನೆ, ಮತ್ತು ವಿಶೇಷ ಗುಂಪಿನ ಯೋಜನೆಯಡಿಯಲ್ಲಿ ಸಾಲ ಪಡೆದ ಫಲಾನುಭವಿಗಳು ತಮ್ಮ ಅಸಲು ಸಾಲವನ್ನು ದಿನಾಂಕ:31.3.2012ರೊಳಗೆ ಮರುಪಾವತಿಸಿದಲ್ಲಿ ಅಂತಹ ಫಲಾನುಭವಿಗಳಿಗೆ ಬಡ್ಡಿ ಮನ್ನಾ ಮಾಡಲು ಸರ್ಕಾರದ ಆದೇಶವನ್ನು ಹೊರಡಿಸಲಾಗಿತ್ತು.

ಓದಲಾಗಿರುವ ಸರ್ಕಾರದ ಪತ್ರ (3)ರಲ್ಲಿ ಪ್ರಸ್ತುತ ವಿಷಯಕ್ಕೆ ದಿನಾಂಕ:31.03.2012ರೊಳಗೆ ಸಾಲದ ಮೇಲೆನ ಬಡ್ಡಿ ಮನ್ನಾ ಸೌಲಭ್ಯವನ್ನು ವಿಸ್ತರಿಸುವ ಬಗ್ಗೆ ಪನರ್‌ಪರಿಶೀಲನೆ ನಡೆಯುತ್ತಿದ್ದರಿಂದ ಸದರಿ ಅವಧಿಯನ್ನು ದಿನಾಂಕ:1.04.2012ರಿಂದ ಮುಂದಿನ ಆದೇಶದವರೆಗೆ ಅವಧಿ ವಿಸ್ತರಿಸಿ, ನಿರ್ದೇಶನ ನೀಡಲಾಗಿತ್ತು.

ಓದಲಾಗಿರುವ ನಿಗಮದ ಪತ್ರ (4)ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ "ನನ್ನ ಮನೆ ನನ್ನ ಸ್ವತ್ತು" ಯೋಜನೆಯಡಿ ಓದಲಾಗಿರುವ ಸರ್ಕಾರದ ಆದೇಶ (2)ರಲ್ಲಿ ದಿನಾಂಕ:31.03.2012ರೊಳಗೆ ವಸತಿ ಯೋಜನೆಯಡಿ ಸಾಲ ಪಡೆದುಕೊಂಡಿರುವ ಫಲಾನುಭವಿಗಳು ಬಡ್ಡಿ ಮನ್ನಾ ಮಾಡಲು ಅವಕಾಶ ಕಲ್ಪಿಸಲಾಗಿತ್ತು. ಇದರಲ್ಲಿ ಹೆಚ್ಚಿನ ಪ್ರಗತಿ ಕಂಡು ಬರುತ್ತಿಲ್ಲವೆಂದು ತಿಳಿಸಿ ಸದರಿ ಮನೆಗಳಲ್ಲಿ ಅನಧಿಕೃತರು ವಾಸವಾಗಿದ್ದು, ಕೆಲವು ಮನೆಗಳು ಬೇರೆಯವರಿಗೆ ಹಸ್ತಾಂತರಿಸಲಾಗಿದ್ದು ಮತ್ತು ಕೆಲವರು ಭೋಗ್ಯಕ್ಕೆ ನೀಡಿರುವುದಾಗಿ ಕಂಡುಬಂದಿದ್ದರಿಂದ ಈ ಮನೆಗಳಲ್ಲಿ ಅನಧಿಕೃತವಾಗಿ ವಾಸವಾಗಿರುವ ಬಡತನ ರೇಖೆಗಿಂತ ಕೆಳಗಿರುವ ಫಲಾನುಭವಿಗಳಿಂದ ಸಾಲ ವಸೂಲಿ ಮಾಡಿಕೊಂಡು ಅಡಮಾನ ಪತ್ರವನ್ನು ಬಿಡುಗಡೆ ಮಾಡಬಹುದೆಂದು ಪ್ರಸ್ತಾವನೆ ಮಾಡಿರುತ್ತಾರೆ. ಸರ್ಕಾರವು ಕಾನೂನು ಇಲಾಖೆಯ ಅಭಿಪ್ರಾಯ ಪಡೆದು, ಆ ಅಭಿಪ್ರಾಯದಂತೆ ಪರಿಶೀಲಿಸಿ, ಪರಿಷ್ಕೃತ ಪ್ರಸ್ತಾವನೆ ಸಲ್ಲಿಸುವಂತೆ ಕೋರಿದ್ದರ ಹಿನ್ನೆಲೆಯಲ್ಲಿ, ನಿಗಮವು ಓದಲಾಗಿರುವ (5)ರ ಪತ್ರದಲ್ಲಿ ಕೆಲವು ಸ್ಪಷ್ಟೀಕರಣಗಳೊಂದಿಗೆ, ಸರ್ಕಾರದ ವಸತಿ ಯೋಜನೆಗಳಡಿಯಲ್ಲಿ ಮನೆಯನ್ನು ಭೋಗ್ಯಕ್ಕೆ/ಬಾಡಿಗೆಗೆ, ಅನಧಿಕೃತ ವಾಸವಾಗಿರುವಂತಹ ಪ್ರಕರಣಗಳಲ್ಲಿ ಮೂಲ ಫಲಾನುಭವಿಗಳಿಗೆ ನೋಟೀಸ್‌ನ್ನು ಜಾರಿ ಮಾಡಿ ನಿಯಮಾನುಸಾರ ಅವರಿಗೆ ಕಾಲಾವಕಾಶ ನೀಡಿ ರದ್ದುಗೊಳಿಸಬಹುದು ಮತ್ತು ಹಾಲಿ ವಾಸವಾಗಿರುವವವರು ಸಾಲದ ಮೊತ್ತ ಪಾವತಿಸಿದ್ದಲ್ಲಿ ಬಡತನ ರೇಖೆಗಿಂತ ಕೆಳಗಿದ್ದು ಅರ್ಹತೆ ಹೊಂದಿದ್ದರೆ ಅವರಿಗೆ ಮನೆಯನ್ನು ಮರುಹಂಚಿಕೆ ಮಾಡಬಹುದೆಂದು ಪ್ರಸ್ತಾಪಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ವ ಇ 20 ಹೆಚ್‌ಎಹೆಚ್ 2011, ಬೆಂಗಳೂರು, ದಿನಾಂಕ:18.05.2012**

ಸರ್ಕಾರವು "ನನ್ನ ಮನೆ ನನ್ನ ಸ್ವತ್ತು" ಯೋಜನೆ ಅನುಷ್ಠಾನಗೊಳಿಸಲು ಮೇಲೆ ಓದಲಾಗಿರುವ (2)ರಲ್ಲಿ ಹೊರಡಿಸಿರುವ ಆದೇಶವನ್ನು ಸಂಪೂರ್ಣವಾಗಿ ಮರು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

ದಿನಾಂಕ:09.07.2003ರಲ್ಲಿ ನಿಗಮವು ಹೊರಡಿಸಿರುವ ಸುತ್ತೋಲೆಗಳ ನಿಬಂಧನೆಗಳ ಮೇರೆಗೆ ವಸತಿ ಯೋಜನೆಗಳಡಿ ಫಲಾನುಭವಿಗಳಿಗೆ ಹಂಚಿಕೆ ಮಾಡಲಾದ ಮನೆಗಳ ಹಂಚಿಕೆಗೆ ನಿಯಮ ಉಲ್ಲಂಘಿಸಿದ್ದಲ್ಲಿ;

1. ನಿಗದಿತ ಅವಧಿಯ (15 ವರ್ಷಗಳೊಳಗೆ) ಪೂರ್ವದಲ್ಲಿಯೇ ಮನೆಯನ್ನು ಮಾರಾಟ ಅಥವಾ ಬೇರೆಯವರಿಗೆ ಹಸ್ತಾಂತರ ಮಾಡಿದ್ದರೆ;
2. ಹಂಚಿಕೆ ಮಾಡಲಾದ ಮನೆಯನ್ನು ಭೋಗ್ಯಕ್ಕೆ ಅಥವಾ ಬಾಡಿಗೆಗೆ ನೀಡಿದ್ದರೆ;
3. ಹಂಚಿಕೆ ಮಾಡಲಾದ ಮನೆಯಲ್ಲಿ ವಾಸ ಮಾಡದೆ, ಖಾಲಿ ಬಿಟ್ಟಿದ್ದರೆ;

ಅ) ಅವರ ಹಂಚಿಕೆಗಳನ್ನು ರದ್ದುಗೊಳಿಸಲು ಸಂಬಂಧಪಟ್ಟ ಪ್ರಾಧಿಕಾರಗಳಾದ ಅಂದರೆ, ನಗರ ಸ್ಥಳೀಯ ಸಂಸ್ಥೆಗಳಾಗಿದ್ದಲ್ಲಿ ಜಿಲ್ಲಾಧಿಕಾರಿಗಳಿಗೆ ಮತ್ತು ಪಂಚಾಯತ್ ರಾಜ್ ಸಂಸ್ಥೆಗಳಾಗಿದ್ದಲ್ಲಿ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳಿಗೆ ನಿಗಮದ ಸುತ್ತೋಲೆ ದಿನಾಂಕ:09.7.2003 ರಲ್ಲಿ ಪ್ರಾಧಿಕಾರ ನೀಡಲಾಗಿದೆ. ಇಂತಹ ನಿಯಮ ಉಲ್ಲಂಘನೆಯಾದ ಪ್ರಕರಣಗಳು ಆಯಾ ಪ್ರಾಧಿಕಾರಗಳ ಗಮನಕ್ಕೆ ಬಾರದೆ, ಸರ್ಕಾರಕ್ಕೆ ಪಾವತಿಯಾಗಬೇಕಾಗಿರುವ ಸಾಲದ ಮೊತ್ತವಾಗಲೀ ಅಥವಾ ಬಡ್ಡಿಯಾಗಲೀ ಈವರೆವಿಗೂ ಪಾವತಿಯಾಗಿರುವುದಿಲ್ಲ. ಆದಕಾರಣ ಸರ್ಕಾರವು "ನನ್ನ ಮನೆ ನನ್ನ ಸ್ವತ್ತು" ಯೋಜನೆಯನ್ನು ಜಾರಿಗೊಳಿಸಿ, ಸಾಲದ ಮೊತ್ತ ಮರು ಪಾವತಿಸಲು ಸಾಕಷ್ಟು ಜಾಹಿರಾತು ಮತ್ತು ಆಂದೋಲನಗಳನ್ನು ಕೈಗೊಂಡ ಸಂದರ್ಭದಲ್ಲಿ ಮನೆ ಹಂಚಿಕೆಯ ನಿಯಮ ಉಲ್ಲಂಘನೆ

ಪ್ರಕರಣಗಳು ಬಯಲಿಗೆ ಬರುತ್ತಿವೆ. ಅಂತಹ ಮನೆಗಳ ಹಂಚಿಕೆ ರದ್ದುಪಡಿಸಿ, ಅವುಗಳನ್ನು ಹಿಂದಕ್ಕೆ ಪಡೆದುಕೊಂಡು ಅಲ್ಲಿ ವಾಸ ಮಾಡುತ್ತಿರುವವರು ಮನೆ ಹಂಚಿಕೆಗೆ ಅರ್ಹರಾಗಿದ್ದಲ್ಲಿ ಸಾಲದ ಮೊತ್ತವನ್ನು ಪಾವತಿಸಿಕೊಂಡು, ಅವರಿಗೆ ಮರುಹಂಚಿಕೆ ಮಾಡುವುದು.

ಆ) ಮನೆ ಹಂಚಿಕೆಯಾದ ಫಲಾನುಭವಿಯು ತನ್ನ ಮನೆಯಲ್ಲಿ ವಾಸವಾಗಿರದೇ, ಆ ಮನೆಯನ್ನು ಭೋಗ್ಯಕ್ಕೆ/ಬಾಡಿಗೆಗೆ ನೀಡಿದ್ದರೆ, ಅಥವಾ ಬೇರೆಯವರಿಗೆ ಹಸ್ತಾಂತರಿಸಿದ್ದಲ್ಲಿ ಆ ಮನೆಯ ಹಂಚಿಕೆಯನ್ನು ರದ್ದುಪಡಿಸುವುದು. ಆ ಮನೆಯಲ್ಲಿ ವಾಸವಾಗಿರುವವರು (ಭೋಗ್ಯಕ್ಕೆ/ಬಾಡಿಗೆಗೆ ಪಡೆದವರು) ಮನೆ ಪಡೆಯಲು ಅರ್ಹರಾಗಿದ್ದಲ್ಲಿ, ಮರುಹಂಚಿಕೆ ಮಾಡುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳು (ಗ್ರಾಮ ಪಂಚಾಯತಿಗಳು ಅಥವಾ ನಗರ ಸ್ಥಳೀಯ ಸಂಸ್ಥೆಗಳು) ನಿಯಮಾವಳಿಗಳ ಮೇರೆಗೆ 21 ದಿನಗಳ ನೋಟೀಸನ್ನು ಮೂಲ ಫಲಾನುಭವಿಗೆ ನೀಡಿ ಹಂಚಿಕೆಯನ್ನು ರದ್ದು ಮಾಡುವುದು. ಆ ಮನೆಯಲ್ಲಿ ವಾಸವಾಗಿರುವವರಿಂದ ಬಾಕಿ ಇರುವ ಸಾಲದ ಮೊತ್ತ ಪಾವತಿಸಿಕೊಂಡು ಮನೆಯನ್ನು ಅವರಿಗೆ ಮರುಹಂಚಿಕೆ ಮಾಡಲು ಕ್ರಮ ಕೈಗೊಳ್ಳುವುದು.

ಇ) ಮನೆ ಹಂಚಿಕೆಯಾದ ಫಲಾನುಭವಿಯು ತನ್ನ ಮನೆಯಲ್ಲಿ ವಾಸವಾಗಿರದೇ, ಹಾಗೆಯೇ ಖಾಲಿ ಬಿಟ್ಟಿದ್ದರೆ, ಮರುಹಂಚಿಕೆ ಮಾಡುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳು ನಿಯಮಾವಳಿಗಳ ಮೇರೆಗೆ 21 ದಿನಗಳ ನೋಟೀಸ್ ನೀಡಿ ಮೂಲ ಫಲಾನುಭವಿಯು ಸಾಲ ಮರುಪಾವತಿಸಲು ಮುಂದೆ ಬಾರದಿದ್ದಲ್ಲಿ, ಅಂತಹ ಹಂಚಿಕೆಯನ್ನು ನಿಯಮಾನುಸಾರ ರದ್ದುಗೊಳಿಸಿ, ಬೇರೆ ಅರ್ಹ ಫಲಾನುಭವಿಗಳಿಗೆ ಸಾಲದ ಮೊತ್ತ ಪಾವತಿಸಿಕೊಂಡು ಮನೆಯನ್ನು ಸಂಬಂಧಪಟ್ಟ ಪ್ರಾಧಿಕಾರಗಳು (ಗ್ರಾಮ ಪಂಚಾಯತಿಗಳು ಅಥವಾ ನಗರ ಸ್ಥಳೀಯ ಸಂಸ್ಥೆಗಳು) ಮರುಹಂಚಿಕೆ ಮಾಡುವುದು.

ಮೇಲೆ ಹೇಳಿರುವ ಫಲಾನುಭವಿಗಳಿಗೆ ಹಂಚಿಕೆಯಾದ ಮನೆ/ನಿವೇಶನಗಳಿಗೆ ಸಂಬಂಧಪಟ್ಟಂತೆ ನಿಯಾಮಾವಳಿಗಳು, ಷರತ್ತುಗಳು ಉಲ್ಲಂಘನೆಯಾಗಿದ್ದಲ್ಲಿ ಅವರಿಗೆ ಮಾಡಲಾದ ಹಂಚಿಕೆಯನ್ನು ನಿಯಮಾನುಸಾರ ರದ್ದುಪಡಿಸಿ, ಮನೆ/ನಿವೇಶನವನ್ನು ಹಿಂದಕ್ಕೆ ಪಡೆದುಕೊಂಡು, ನಂತರ ಸದರಿ ಮನೆ/ನಿವೇಶನಗಳಲ್ಲಿ ವಾಸ ಮಾಡುತ್ತಿರುವ ಬಡತನ ರೇಖೆಗಿಂತ ಕೆಳಗಿನ ಅರ್ಹ ಕುಟುಂಬಕ್ಕೆ ಅವರಿಂದ ಸಾಲ ಮರುಪಾವತಿಸಿಕೊಂಡು ಸಂಬಂಧಪಟ್ಟ ಪ್ರಾಧಿಕಾರಗಳಿಂದ ಹಂಚಿಕೆ ಮಾಡುವುದು.

ಈ ಮೇಲಿನ ಪ್ರಕ್ರಿಯೆಯನ್ನು ಜಾರಿಗೊಳಿಸುವ ಸಲುವಾಗಿ "ನನ್ನ ಮನೆ ನನ್ನ ಸ್ವತ್ತು" ಯೋಜನೆಯಡಿ ಸಾಲ ಮರುಪಾವತಿ ಮಾಡುವ ದಿನಾಂಕ:31.3.2012 ರ ಗಡುವನ್ನು ದಿನಾಂಕ:31.3.2013 ರ ವರೆಗೆ ವಿಸ್ತರಿಸಲಾಗಿದೆ. ಈ ಸರ್ಕಾರಿ ಆದೇಶವನ್ನು ಅನುಷ್ಠಾನಗೊಳಿಸಲು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದವರು ಸೂಕ್ತ ಸುತ್ತೋಲೆಗಳನ್ನು ಹೊರಡಿಸುವುದು.

ಈ ಮೇಲೆ ತಿಳಿಸಿರುವ ಸೌಲಭ್ಯಗಳನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯವರು ವಿವಿಧ ಯೋಜನೆಗಳಡಿ ನಿರ್ಮಿಸಿರುವ ಕೊಳಗೇರಿ ಪ್ರದೇಶದ ಫಲಾನುಭವಿಗಳಿಗೂ ಸಹ ದೊರಕಿಸಲು ಆದೇಶ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಶಂಕರಪ್ಪ**

**ಪಿ.ಆರ್. 1478** ಪೀಠಾಧಿಕಾರಿ–2, ವಸತಿ ಇಲಾಖೆ.

## ವಸತಿ ಸಚಿವಾಲಯ

**ವಿಷಯ:** ಬಿಜಾಪುರ ಜಿಲ್ಲೆ ಸಿಂಧಗಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನಾಮನಿರ್ದೇಶಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂ. ವಇ 42 ಹೆಚ್ಎಎಂ 1999 ದಿನಾಂಕ: 10.05.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪಟ್ಟಣ ಹಾಗೂ ಗ್ರಾಮೀಣ ಪ್ರದೇಶಗಳಿಗೆ ಪ್ರತ್ಯೇಕ ಆಶ್ರಯ ಸಮಿತಿಗಳನ್ನು ಪುನರ್ ರಚಿಸಿ, ಸಮಿತಿಯ ಸದಸ್ಯರ ಅಧಿಕಾರ ಮತ್ತು ಕರ್ತವ್ಯಗಳನ್ನು ನಿಗದಿಪಡಿಸಿ ಆದೇಶವನ್ನು ಹೊರಡಿಸಿದೆ. ಈ ಪರಿಷ್ಕೃತ ಆದೇಶದನ್ವಯ ಬಿಜಾಪುರ ಜಿಲ್ಲೆ ಸಿಂಧಗಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ವಇ 74 ಹೆಚ್‌ಎಎಸ್ 2011, ಬೆಂಗಳೂರು, ದಿನಾಂಕ: 22ನೇ ಮೇ 2012**

ಬಿಜಾಪುರ ಜಿಲ್ಲೆ **ಸಿಂಧಗಿ** ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನು ನೇಮಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿ ಆದೇಶಿಸಿದೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಶ್ರೀ ಶಿವಾನಂದ ಎಂ. ಹಿಟ್ನಳ್ಳಿ, ಸಿಂಧಗಿ | ಹಿಂ. ವ. |
| 2 | ಶ್ರೀ ಅಶೋಕ ಸಿದ್ರಾಮಪ್ಪ ಹನುಮಶೆಟ್ಟಿ, ಸಿಂಧಗಿ | ಸಾಮಾನ್ಯ |
| 3 | ಶ್ರೀ ಶಂಕ್ರೆಪ್ಪ ಹುಚ್ಚಪ್ಪ ಮಡ್ನಳ್ಳಿ, ಸಿಂಧಗಿ | ಪ. ಜಾತಿ |
| 4 | ಶ್ರೀಮತಿ ಗೌಸಿಯಾ ಅಲ್ಲಾಭಕ್ಷ ಶಿಕಲಗಾರ, ಮೋರಟಗಿ ನಾಕ, ಸಿಂಧಗಿ | ಅ. ಸಂ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಶಂಕರಪ್ಪ**

ಪೀಠಾಧಿಕಾರಿ-2, ವಸತಿ ಇಲಾಖೆ.

**ಪಿ.ಆರ್. 1479**

## ವಸತಿ ಸಚಿವಾಲಯ

**ವಿಷಯ:** ದಾವಣಗೆರೆ ಜಿಲ್ಲೆ ದಾವಣಗೆರೆ ಉತ್ತರ ವಿಧಾನಸಭಾ ಕ್ಷೇತ್ರದ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನಾಮನಿರ್ದೇಶಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999 ದಿನಾಂಕ: 10.05.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪಟ್ಟಣ ಹಾಗೂ ಗ್ರಾಮೀಣ ಪ್ರದೇಶಗಳಿಗೆ ಪ್ರತ್ಯೇಕ ಆಶ್ರಯ ಸಮಿತಿಗಳನ್ನು ಪುನರ್ ರಚಿಸಿ, ಸಮಿತಿಯ ಸದಸ್ಯರ ಅಧಿಕಾರ ಮತ್ತು ಕರ್ತವ್ಯಗಳನ್ನು ನಿಗದಿಪಡಿಸಿ ಆದೇಶವನ್ನು ಹೊರಡಿಸಿದೆ. ಈ ಪರಿಷ್ಕೃತ ಆದೇಶದನ್ವಯ ದಾವಣಗೆರೆ ಜಿಲ್ಲೆ ದಾವಣಗೆರೆ ಉತ್ತರ ವಿಧಾನಸಭಾ ಕ್ಷೇತ್ರದ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ವಇ 35 ಹೆಚ್‌ಎಎಸ್ 2012, ಬೆಂಗಳೂರು, ದಿನಾಂಕ: 22ನೇ ಮೇ 2012**

ದಾವಣಗೆರೆ ಜಿಲ್ಲೆ ದಾವಣಗೆರೆ ಉತ್ತರ ವಿಧಾನಸಭಾ ಕ್ಷೇತ್ರದ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನು ನೇಮಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿ ಆದೇಶಿಸಿದೆ.

| | | |
|---|---|---|
| 1 | ಶ್ರೀ ಕಾಳಿಂಗ ರಾವ್ ಬಿನ್ ಸಾಳಂಕಿ ಬಿನ್ ದುರುಗೋಜಿ ರಾವ್, 3ನೇ ಮೇನ್, 10ನೇ ಕ್ರಾಸ್, ಯಲ್ಲಮ್ಮನಗರ, ದಾವಣಗೆರೆ. | ಹಿಂ. ವರ್ಗ |
| 2 | ಶ್ರೀ ಬಿ.ಎಲ್. ಕಾಂತರಾಜ್ ಬಿನ್ ಲಕ್ಷ್ಮಣಪ್ಪ, ನಂ. 498/1, 12ನೇ ಕ್ರಾಸ್, ಕೆ.ಟಿ.ಜೆ. ನಗರ, ಜಿಲ್ಲಾ ಖಜಾನೆ ಎದುರು, ದಾವಣಗೆರೆ. | ಅ.ಸಂ |
| 3 | ಶ್ರೀಮತಿ ಪಾರ್ವತಮ್ಮ ಕೋಂ. ಜಿ. ಕೃಷ್ಣಪ್ಪ,<br>ಶ್ರೀರಾಮ ಬಡಾವಣೆ, **"**ಶ್ರೀರಂಗ ನಿಲಯ**"**,<br>ಚಿದಂಬರ ದೇವಸ್ಥಾನದ ಹತ್ತಿರ, ನಿಟ್ಟುವಳ್ಳಿ, ದಾವಣಗೆರೆ. | ಪ. ಜಾತಿ<br>ಮಹಿಳೆ |
| 4 | ಶ್ರೀ ಎನ್.ಎಂ. ವೆಂಕಟೇಶ್ ಬಿನ್ ತಿರುಮಲಯ್ಯ, ನಂ. 150/1, ಐ.ಟಿ.ಐ. ಹಿಂಭಾಗ, ದೇವರಾಜ ಸೊಸೈಟಿ ಎದುರು, ದಾವಣಗೆರೆ. | ಸಾಮಾನ್ಯ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಶಂಕರಪ್ಪ**

ಪೀಠಾಧಿಕಾರಿ-2, ವಸತಿ ಇಲಾಖೆ.

**ಪಿ.ಆರ್. 1480**

